—॥ ಶ್ರೀ ॥—

ಪಠನ, ಪಾರಾಯಣ, ಪೂಜಾದಿಗಳ ಕ್ಷಿಪ್ರ ಫಲಪ್ರದವಾದ ಪವಿತ್ರ ಗ್ರಂಥ

# ಕನ್ನಡ ಗುರುಗೀತೆ

ಲೇಖಕರು :
ಶ್ರೀ ಅಮರನಾಥಶಾಸ್ತ್ರಿಗಳು, ವಿದ್ವಾನ್
ಹಿರೇಮಠ, ಬನ್ನಿಗೋಳ,
ತಾಲೂಕು-ಲಿಂಗಸೂಗೂರು.



ಪ್ರಕಾಶಕರು :
...ಯು. ಎಂ. ನಾಗೇಶಶರ್ಮಾ
ಸಂಸ್ಕೃತ ಪಂಡಿತರು,
ಹೈಸ್ಕೂಲು :: ಕಂಪ್ಲಿ.



ಬೆಲೆ: ರೂ. ೨-೦೦

## ಪ್ರಕಾಶಕರ ವಿಜ್ಞಾಪನೆ



"ಹರಮುನಿದರೂ ಗುರುಕಾಯ್ವಂ" ಎಂಬಂತೆ ಗುರುಮಹತ್ವವು ಇಡೀ ವಿಶ್ವದಲ್ಲಿ ಸೂರ್ಯಪ್ರಕಾಶದಷ್ಟು ಜಾಜ್ವಲ್ಯಮಾನವಾಗಿದೆ. ಇಂತಹ ಗುರು ಮಹತ್ವವನ್ನು ಗುರುಗೀತೆಯು ಕೂಲಂಕಷವಾಗಿ ತಿಳಿಸುವುದಲ್ಲದೆ ಜಪವಿಧಿ, ಗುರುಶಿಷ್ಯ ಲಕ್ಷಣ ಮುಂತಾದುವನ್ನು ವಿಶದವಾಗಿ ತಿಳಿಸುತ್ತಿದೆ. ಗುರು ಭಕ್ತರಾದ ವಿಶ್ವದ ಮಾನವರೆಲ್ಲರೂ ಗುರುಭಜನೆಯಿಂದ ಭುಕ್ತಿ ಮುಕ್ತಿಗಳನ್ನು ಹೊಂದುವರು.

ಈ ಗುರುಗೀತೆಯು ಸ್ಕಾಂದ ಪುರಾಣದ ಉತ್ತರ ಭಾಗದಲ್ಲಿದೆ. ಇದು ಶ್ಲೋಕ ೪೯–೫೦–೫೧ ರಲ್ಲಿ "ತತ್ವಮಸಿ" ಮುಂತಾದ ಮಹಾವಾಕ್ಯಗಳಿಂದ ಅದ್ವೈತ ತತ್ವವನ್ನು ಪ್ರತಿಪಾದಿಸುತ್ತಿದೆಯಾದರೂ "ಲಿಂಗಂತತ್ಪದಮಾಖ್ಯಾತಂ, ಅಂಗಂತ್ವಂ ಪದ ಮೀರಿತಂ" ಸಂಬಂಧೋಽಸಿಪದಂ ಪ್ರೋಕ್ತಂ, ಎಂಬಂತೆ ಅದರ ಪರ್ಯಾಯಾರ್ಥವಾದ ಲಿಂಗಾಂಗ ಸಂಬಂಧಾರ್ಥದಿಂದಲೂ "ಶಿವ ಶಕ್ತ್ಯಾತ್ಮಕಂ ಪರಂ" ಶ್ಲೋ ೯೩ "ತಥಾ ಬ್ರಹ್ಮಣಿ ಶಾಶ್ವತಂ" ಶ್ಲೋ ೧೬೫ "ವಾಮಾಂಕ ಪೀಠ ಸ್ಥಿತ ದಿವ್ಯಶಕ್ತಿಂ" ಶ್ಲೋ ೧೧೦ ಇತ್ಯಾದಿ ವಾಕ್ಯಗಳಿಂದಲೂ ಗುರುಗೀತೆಯು ಮಾರ್ಮಿಕವಾಗಿ ಶಕ್ತಿ ವಿಶಿಷ್ಟಾದ್ವೈತ ಸಿದ್ಧಾಂತವನ್ನು ಬೋಧಿಸುವುದಾಗಿದೆ.

ಸಂಸ್ಕೃತ ಭಾಷೆಯ ಈ ಗುರುಗೀತೆಯ ಅರ್ಥವನ್ನು ತಿಳಿದು ನಿತ್ಯ ಪಾರಾಯಣ ಮಾಡಲು ಅನುಕೂಲವಾಗುವಂತೆ ಉಭಯ ಕವಿತಾ ಭೂಷಣಾದಿ ಬಿರುದಾಂಕಿತರಾದ ಶ್ರೀ ಬಿ. ಹೆಚ್. ಯಂ. ಅಮರನಾಥಶಾಸ್ತ್ರೀ ವಿದ್ವಾನ್ ಇವರು ಕನ್ನಡದಲ್ಲಿ ಕಂದಪದ್ಯ ರೂಪವಾಗಿ ಪರಿವರ್ತಿಸಿ ಎಲ್ಲಾ ಸಮಾಜಕ್ಕೂ ಮಹೋಪಕಾರವನ್ನೆಸಗಿದ್ದಾರೆ.

ಇವರು ರಚಿಸಿರುವ ಗುರುಸ್ಥಲ ಸಿದ್ಧಾಂತ ದೀಪಿಕಾ, ಏಕೋದೇವ ಸಿದ್ಧಾಂತ "ಬಸವ ಮಂತ್ರದರ್ಪಣ" ಮುಂತಾದ ಗ್ರಂಥಗಳು ಅಚ್ಚಿಗೆ ಸಿದ್ಧವಾಗಿದ್ದು ಗೃಹಕೃತ್ಯದ ತೊಂದರೆಮೂಲಕ ತಟಸ್ಥವಾಗಿಯೇ ಉಳಿದಿವೆ. ಈಗ ಅಚ್ಚುಮಾಡಿದ ಈ ಗ್ರಂಥ ರತ್ನಕ್ಕೆ ಧರ್ಮನಿಷ್ಠರಾದ ಗುರುಭಕ್ತರೆಲ್ಲರೂ ಸಹಾಯಮಾಡಿ ರತ್ನಗರ್ಭ ಗಣಪತಿಯಿಂದ ರತ್ನಗಳು ವ್ಯಕ್ತವಾಗುವಂತೆ ಈ ಪಂಡಿತರಿಂದ ಇನ್ನೂ ಉನ್ನತವಾದ ಗ್ರಂಥ ರತ್ನಗಳು ಪ್ರಕಟವಾಗಲ ಸಹಾಯ ನೀಡುವಿರೆಂದು ನಂಬಿರುವ,



ಪ್ರಕಾಶಕರು :—

ಯು. ಎಂ. ನಾಗೇಶಶರ್ಮಾ,
ಸಂಸ್ಕೃತ ಪಂಡಿತರು,
ತಾಲೂಕುಬೋರ್ಡ ಹೈಸ್ಕೂಲು ಕಂಪ್ಲಿ.
( ಜಿಲ್ಲಾ—ಬಳ್ಳಾರಿ. )

* ಪುಸ್ತಕ ದೊರೆಯುವ ಸ್ಥಳ– ಲೇಖಕರು ಪ್ರಕಾಶಕರು ಮತ್ತು
ಜಿ. ಯಂ. ವಿರೂಪಾಕ್ಷಯ್ಯನವರು ಎಲೆಕ್ಟ್ರಿಕ್
ಕಾಫಿವರ್ಕ್ಸ್, ಟೀ ಕಾಫೀ ಫ್ಯಾಕ್ಟರಿ,
ಬೆಂಗಳೂರು ರೋಡ್, ಬಳ್ಳಾರಿ

## — ಕನ್ನಡ ಗುರುಗೀತೆಯ ಅನುಕ್ರಮಣಿಕೆ —

॥ ಓಂ ಸದ್ಗುರು ಪರಬ್ರಹ್ಮಣೇನಮಃ ॥

# ಮುನ್ನುಡಿ

---

ಶ್ರೀಮತ್ಪರಬ್ರಹ್ಮ ಗುರುಂಭಜಾಮಿ । ಶ್ರೀಮತ್ಪರಬ್ರಹ್ಮ ಗುರುಂವದಾಮಿ ।
ಶ್ರೀಮತ್ಪರಬ್ರಹ್ಮ ಗುರುಂಸ್ಮರಾಮಿ । ಶ್ರೀಮತ್ಪರಬ್ರಹ್ಮ ಗುರುಂನಮಾಮಿ ॥

ಶ್ರೀ ವೇದವ್ಯಾಸೋಕ್ತಗಳಾದ ಭಗವದ್ಗೀತಾ ಶಿವಗೀತಾ ಗುರುಗೀತೆಗಳೆಂಬ ಗೀತಾತ್ರಯವು ಆಸ್ತಿಕರಾದ ಭಾರತೀಯರಿಗೆಲ್ಲಾ ದಿವ್ಯ ರತ್ನತ್ರಯದಂತಿದೆ. ಇವುಗಳಲ್ಲಿ ಶ್ರುತಿ ಸೀಮಂತರತ್ನವೆನಿಸಿದ "ಗುರುಗೀತೆ" ಯು ಸ್ಕಾಂದ ಮಹಾಪುರಾಣದ ಉತ್ತರ ಭಾಗದಲ್ಲಿ ಶಿವ ಪಾರ್ವತೀ ಸಂವಾದರೂಪವಾಗಿದೆ. ಶ್ರೀಗುರು ಮಹತ್ವವನ್ನು ಕೂಲಂಕಷವಾಗಿಯೂ, ಹೃದಯಂಗಮವಾಗಿಯೂ ವಿವರಿಸುವ ಪರಮ ಪವಿತ್ರ ಗ್ರಂಥವೆಂದರೆ ಇದೊಂದೇಯೆಂದು ಕೈಯೆತ್ತಿ ಹೇಳಬಹುದು. ಇದರಲ್ಲಿ ಕರನ್ಯಾಸ, ಅಂಗನ್ಯಾಸ, ಧ್ಯಾನಾದಿ ವಿಧಿಗಳೂ, ಗುರು ಶಿಷ್ಯ ಲಕ್ಷಣ, ಗುರುತತ್ವ ಸಿದ್ಧಾಂತಾದಿಗಳೂ ವಿಶದವಾಗಿ ಹೇಳಲ್ಪಟ್ಟವೆ.

ವಿಶಾಲವಾದೀ ವಿಶ್ವದಲ್ಲಿ ವಿವಿಧ ಮತಗಳಿದ್ದು ದೈವತತ್ವಾದಿ ವಿಚಾರಗಳ ಬಗ್ಗೆ ಭಿನ್ನಭಿನ್ನತೆಯಿದ್ದರೂ ಆಯಾ ಮತಗುರುಗಳ ಬಗ್ಗೆ ಮಾತ್ರ ಒಂದೇವಿಧವಾದ ಪೂಜ್ಯ ಭಾವನೆಯು ಜಾಜ್ವಲ್ಯಮಾನವಾಗಿದೆ. ಈ ಗುರು ಮಹತ್ವವು ಸೂರ್ಯಪ್ರಕಾಶದಂತೆ ವಿವೇಕವೆಂಬ ಕಣ್ಣುಳ್ಳವನಿಗೆ ಮಾತ್ರ ಕಾಣುತ್ತಿದೆ. ವಿವೇಕವಿಲ್ಲದ ಕೆಲವು ಮದಾಂಧರಿಗೆ ಮಾತ್ರ ಸೂರ್ಯೋದಯವು ಕುರುಡರಿಗೆ ಕಾಣಲಾರದಂತಾಗಿದೆ. ಶ್ರೀಗುರುವು ಪುಣ್ಯಕರ್ಮಿಗಳಿಗೆ ಸಾಕ್ಷಾತ್ ಶಿವನಾಗಿ ತೋರುವನು. ಲಿಂಗವನ್ನು ಶಿಲೆಯೆಂದು ಭಾವಿಸುವಂತಹ ನಾಸ್ತಿಕರಾದ ಪಾಪ ಕರ್ಮಿಗಳಿಗೆ ಮಾತ್ರ, ನರರೂಪನಾಗಿ ತೋರುವನು,

ಕೆಲವರು ತಮ್ಮ ಮುಕ್ತಿ ಸಾಧನೆಗೆ ಶಾಸ್ತ್ರಾಧ್ಯಯನ, ಗ್ರಂಥಾವಲೋಕನಾದಿಗಳೇ ಸಾಕೆಂದು ಭಾವಿಸುವರು. ಇಷ್ಟರಿಂದ ಎಂದೂ ಮುಕ್ತಿ ಸುಖವು ದೊರಿಯದು. ಈ ಬಗ್ಯೆ ಛಾಂದೋಗ್ಯೋಪನಿಷತ್ತಿನಲ್ಲಿ "ಆಚಾರ್ಯಾದ್ದೇವ ವಿದ್ಯಾಚ ವಿದಿತಾ ಸ್ವಾದಿಷ್ಟಂಪ್ರಾಪ್ಯತೇ" ರತ್ನಾಕರವೆಂದು ವರ್ಣಿತವಾದ ಸಮುದ್ರದ ನೀರು ದಾಹಪೀಡಿತನಿಗೆ ಕುಡಿಯಲು ಬಾರದಂತಹ ಕಹಿಯಾಗಿದೆ. ಅದೇ ನೀರು ಸೂರ್ಯ ರಶ್ಮಿಯಿಂದ ಆವೆಯಾಗಿ ಮೇಘರೂಪವಾದಾಗ ಅದರ ಮುಖದಿಂದ ದೊರೆತ ಮಳೆಯ ನೀರು ಸ್ವಾದಿಷ್ಟವೂ, ಪಥ್ಯವೂಯೆನಿಸುವುದು. ಅಂತೆಯೇ ಗ್ರಂಥ ರತ್ನಾಕರವಾದ ಶಾಸ್ತ್ರವೆಂಬ ಸಮುದ್ರವು (ಬೀಗ ಮುದ್ರೆಯಿಂದ ಕೂಡಿದ್ದು) ಸ್ವಂತ ಅಧ್ಯಯನಾದಿಗಳಿಂದ ಅನಂತ ಸಂದೇಹ ಸಂದೋಹಗಳುಂಟಾಗಿ ಕಹಿಯೆನಿಸಿ ಜಿಜ್ಞಾಸುವಿನ ದಾಹವು ಶಾಂತವಾಗದು. ಶಾಸ್ತ್ರವೆಂಬ ಸಮುದ್ರದ ನಿಜ ಸಾರವನ್ನು ಸ್ವಾನುಭವ ಜ್ಞಾನವೆಂಬ ಸೂರ್ಯನಿಂದ ಹೀರಿದ ಗುರುವೆಂಬ ಮೇಘ ಮುಖದಿಂದ ನಾದ ಕಳಾ ಬಿಂದುಗಳ ತತ್ವಾಮೃತವನ್ನು ಸೇವಿಸುವುದರಿಂದಲೇ ನಿತ್ಯಾನಂದವು ದೊರೆಯುವುದು. ಆದುದರಿಂದಲೇ ಶ್ರೀ ನಿಜಗುಣ ಶಿವಯೋಗಿಗಳು "ಶ್ರೀಗುರು ವಚನೋಪದೇಶವ ನಾಲಿಸಿ। ದಾಗಳಹುದು ನರರಿಗೆ ಮುಕುತಿ" ಯೆಂದು ತಮ್ಮ ಕೈವಲ್ಯ ಪದ್ಧತಿಯ ಆದಿಯಲ್ಲಿಯೇ ಮಂಗಲೋಕ್ತಿಯಂಪೇಳಿರುವರು. ಶಿವಾಗಮದಲ್ಲಿ,

ಮಥಿತಾತ್ ಶಾಸ್ತ್ರಜಲಧೇ। ರ್ಯುಕ್ತಿಮಂಥಾನ ವೈಭವಾತ್।
ಗುರುಣಾಲಭ್ಯತೇ ಬೋಧ। ಸುಧಾಸು ಮನಸಾಂಗಣೈಃ ॥

ಟೀ॥ ಶಾಸ್ತ್ರವೆಂಬ ಸಮುದ್ರವನ್ನು ಸ್ವಾನುಭವ ಯುಕ್ತಿಯೆಂಬ ಕಡಗೋಲಿನಿಂದ ಮಂಥನ ಮಾಡುವ ಮೂಲಕ ಶ್ರೀಗುರುವು ನಿಜ ತತ್ವಜ್ಞಾನವೆಂಬ ಅಮೃತವನ್ನು ಸುಮನಸ್ಕರಾದ ಶಿಷ್ಯ ಸಮೂಹಕ್ಕೆ ದಯಪಾಲಿಸುವನು.

ಸಂದೇಹವನ ಸಂದೋಹ ಸಮುಚ್ಛೇದ ಕುಠಾರಿಕಾ।
ಯತ್ಸೂಕ್ತಿಧಾರಾ ವಿಮಲಾ। ಸಗುರೂಣಾಂ ಶಿಖಾಮಣಿಃ ॥

ಟೀ॥ ಯಾವಾತನ ನಿರ್ಮಲವಾದ ಸದ್ಬೋಧ ಸೂಕ್ತಿಯೆಂಬ ಧಾರೆಯು (ಕೊಡಲಿಯ ಬಾಯಿ) ಶಿಷ್ಯನ ಸಂದೇಹವೆಂಬ ಅರಣ್ಯ ಸಂದೋಹಗಳನ್ನು ಬೇರು

ಸಹಿತ ಛೇದಿಸುವುದರಲ್ಲಿ ಕೊಡಲಿಯಾಗಿದೆಯೋ ಆತನೇ ಗುರುಗಳಲ್ಲಿ ಶಿಖಾಮಣಿಯು. ರಾಹುರೂಪವಾದ ಸಂಶಯ ಗ್ರಹದಿಂದ ಬಿಡಲ್ಪಟ್ಟಾಗಲೇ ಶಿಷ್ಯನ ಸುಜ್ಞಾನ ಚಂದ್ರಮನು ಹೃದಯಾಕಾಶದಲ್ಲಿ ನಿತ್ಯನಿರ್ಮಲನಾಗಿ ಬೆಳಗುತ್ತಾ ಆನಂದಸಾಗರವನ್ನು ಹೆಚ್ಚಿಸುವನು. ಆದುದರಿಂದ ಸಂಸಾರ ರೋಗದುಃಖ ನಿವೃತ್ತಿಗಾಗಿಯೂ, ನಿತ್ಯಸುಖ ಪ್ರಾಪ್ತಿಗಾಗಿಯೂ ಇಂತಹ ಗುರುವನ್ನು ಆಶ್ರಯಿಸತಕ್ಕದ್ದು.

ಪರಮಾದ್ವೈತ ವಿಜ್ಞಾನ । ಪರಮೌಷಧದಾನತಃ ।
ಸಂಸಾರ ರೋಗನಿರ್ಮಾಥೀ । ದೇಶಿಕಃಕೇನ ಲಭ್ಯತೇ ॥

ಶರಣಾಗತನಾದ ಶಿಷ್ಯನ ಶಕ್ತಿ ತಾರತಮ್ಯವನ್ನರಿತು ಶ್ರೇಷ್ಠವಾದ ಅದ್ವೈತ ಜ್ಞಾನವೆಂಬ ಪರಮೌಷಧದಿಂದ ದೇಶಿಕನಾದ ಗುರುವು ಭವರೋಗವನ್ನು ನಿರ್ಮೂಲಗೊಳಿಸುವನು. ಔಷಧಾಲಯದಲ್ಲಿ ನಾನಾವಿಧ ಔಷಧಿಗಳಿದ್ದರೂ, ರೋಗಿಯು ತಾನೇ ಮನಬಂದಂತೆ ಕೈಗೆಸಿಕ್ಕ ಔಷಧವನ್ನು ತೆಗೆದುಕೊಂಡರೆ ಲಾಭಕ್ಕಿಂತಲೂ ಹಾನಿಯೇ ಹೆಚ್ಚು. ಹಾಗೆ ಮಾಡದೆ ವೈದ್ಯನಿಂದ ತನ್ನ ರೋಗಕ್ಕೆ ತಕ್ಕ ಔಷಧವನ್ನು ತೆಗೆದುಕೊಂಡು ವಿಧಿವತ್ತಾಗಿ ಸೇವಿಸಿದಲ್ಲಿ ರೋಗವು ನಿಶ್ಶೇಷವಾಗುವುದು. ಹೀಗೆಯೇ ಭವರೋಗ ನಿವಾರಣೆಗೂ, ನಿತ್ಯಾನಂದ ಪ್ರಾಪ್ತಿಗೂ ನಾನಾ ಸಾಧನೆಗಳನ್ನು ತಿಳಿಸುವ ಗ್ರಂಥಗಳೂ, ಶಾಸ್ತ್ರಗಳೂ ಹೇರಳವಾಗಿವೆ. ಅವುಗಳ ಯಥಾರ್ಥತೆಯನ್ನರಿತ ಗುರುವೆಂಬ ವೈದ್ಯನಿಂದಲೇ ಭವರೋಗವು ನೀಗಿ ನಿತ್ಯಾನಂದ ಕೈವಲ್ಯವು ದೊರೆಯುವುದು. ಅಂತೆಯೇ ಬಸವಣ್ಣನವರು "ಶಿವಪಥವನರಿವೊಡೆ ಗುರುಪಥವೇ ಮೊದಲು" ಯೆಂತಲೂ ದಾಸರು, "ಗುರುವಿನ ಗುಲಾಮ ನಾಗುವತನಕ ದೊರೆಯದಣ್ಣ ಮುಕುತಿ" ಯೆಂತಲೂ ಹೇಳಿದ್ದಾರೆ.

ಗುರುವರ್ಗವನ್ನು ಎಂಟು ವಿಧವಾಗಿ ವಿಂಗಡಿಸಿದ್ದರೂ ಅದು ದೀಕ್ಷಾಗುರು, ಶಿಕ್ಷಾಗುರು, ಮೋಕ್ಷ ಗುರುವೆಂದು ಮುಖ್ಯವಾಗಿ ಮೂರುವಿಧವಾಗಿದೆ. ಮುಂಡಕೋಪನಿಷತ್ತಿನಲ್ಲಿ, " ತದ್ವಿಜ್ಞಾನಾರ್ಥಂ ಸಗುರುಮೇವಾಭಿಗಚ್ಛೇತಸಮಿತ್ಪಾಣಿಃ ಶ್ರೋತ್ರಿಯಂ ಬ್ರಹ್ಮನಿಷ್ಠಂ" ಜಿಜ್ಞಾಸುವಾದ ಶಿಷ್ಯನು ಆ ಬ್ರಹ್ಮಜ್ಞಾನಕ್ಕೋಸ್ಕರ ಸಮಿತ್ಪಾಣಿಯಾಗಿ ಶ್ರೋತ್ರಿಯನೂ, ಬ್ರಹ್ಮನಿಷ್ಠನೂ ಆದ ಗುರುವನ್ನು ಹೊಂದ

ತಕ್ಕದ್ದು. ಪ್ರಾಚೀನಕಾಲದಲ್ಲಿ ತ್ರೈವರ್ಣಿಗಳು ಉಪನಯನಪೂರ್ವಕ ಗುರುಕುಲವನ್ನು ಸೇರಿದನಂತರ ವೇದ, ವೇದಾಂಗ, ವೇದಾಂತಾದಿ ಜ್ಞಾನವನ್ನು ಪಡೆಯುತ್ತಿದ್ದರು. ಆ ಶಿಷ್ಯರ ಮನೋಬುದ್ಧಿಗಳು ಸೂರ್ಯೋದಯದಲ್ಲಿ ಕಮಲ ಮತ್ತು ಸೂರ್ಯಕಾಂತ ಶಿಲೆಯಂತೆ ವಿಕಾಸಮಯ ಪ್ರಕಾಶಮಯಗಳಾಗುವವು. ಬ್ರಹ್ಮಜ್ಞಾನಿಯಾದ ಆ ಶಿಷ್ಯನ ನಿಷ್ಕಾಮ ಕರ್ಮಗಳು ಅಗ್ನಿದಗ್ಧ ಬೀಜಗಳಂತಾಗುವವು. ಘೃತಾದಿಗಳನ್ನು ಸೇವಿಸುವ ನಾಲಗೆಯಂತೆಯೂ, ನೀರಿನಲ್ಲಿಯ ತಾವರೆ ಯೆಲೆಯಂತೆಯೂ ಆತನು ನಿರ್ಲಿಪ್ತನೆನಿಸುವನು. ಭ್ರಮರ ಚಿಂತನೆಯಿಂದ ಕೀಟವು ಭ್ರಮರವಾದಂತೆ ಶಿವಚಿಂತನೆಯಿಂದ ಶಿಷ್ಯನು ಶಿವಸ್ವರೂಪನಾಗಿ ಅಮೃತತ್ವವನ್ನೈದುವನು.

ಗುರುಪದದ ಶ್ರೇಷ್ಠತೆ :-

**ಗುರು:** ಉಪಾಧ್ಯಾಯ, ಉಪನಯನ ಮಾಡಿದವ, ತಂದೆ, ಅಣ್ಣ, ಸೋದರಮಾವ, ಹೆಣ್ಣು ಕೊಟ್ಟ ಮಾವ, ಸಂರಕ್ಷಣೆ ಮಾಡಿದವ, ತಾಯಿಯ ತಂದೆ, ತಂದೆಯ ತಂದೆ, ಚಿಕ್ಕಪ್ಪ, ದೊಡ್ಡಪ್ಪ, ಬ್ರಾಹ್ಮಣಾದಿ ವರ್ಣಗಳಲ್ಲಿ ಶ್ರೇಷ್ಠನಾದವ, ದ್ವಿಮಾತ್ರೆಯ ಗುರುವರ್ಣ, ಆದ್ಯ, ಅಧಿಕ ಭಾರವಾದುದು, ಅಧಿಕ ಉದ್ದವಾದುದು, ಬೃಹಸ್ಪತಿ, ದ್ರೋಣ ಮುಂತಾಗಿ ಅನೇಕಾರ್ಥಗಳು ಗುರುಶಬ್ದದ ಶ್ರೇಷ್ಠಾರ್ಥವನ್ನೇ ಹೇಳುತ್ತಿವೆ. ಸಂಸ್ಕೃತ ಕನ್ನಡವೆರಡರಲ್ಲಿ ಗುರುಪದವು ಅವಯವವಿದ್ದಾಗಲೂ ವಿಶೇಷಾರ್ಥವನ್ನೇ ಕೊಡುತ್ತಿದೆ.

ಸಂಸ್ಕೃತದಲ್ಲಿ :-

**ಗುರುಗುಂಡಿತಂ:** ಘಟನೆ ಮಾಡಲ್ಪಟ್ಟ ಪದಾರ್ಥ (ಇಲ್ಲಿ ಶಿವಜೀವ ಸಂಘಟನೆಯು ವ್ಯಕ್ತವಾಗುತ್ತಿದೆ).

**ಗುರುನಾಭ:** ಅಗುರು ಗಿಡ (ಇದು ಸುಟ್ಟರೂ ಸುವಾಸನೆ ಬಿಡದಂತೆ ಯಾವ ಕಾಲದಲ್ಲಿಯೂ, ಶಾಂತ್ಯಾದಿ ಸಂಪನ್ನತೆಯು) ವಿದಿತವಾಗುತ್ತೆ.

ಕನ್ನಡದಲ್ಲಿ :-

**ಉಗುರು:** (ನ+ಖ) ಇದು ಇಂದ್ರಿಯವಲ್ಲದಿದ್ದರೂ ಚೈತನ್ಯಯುತವಾಗಿ ಬೆಳೆಯುತ್ತಲೂ, ಛೇದನಾದಿಗಳಲ್ಲಿ ನಿಶ್ಚೈತನ್ಯವಾಗಿರುತ್ತಲೂ ಗುರುವಿನ ಅವಾಚ್ಯಾತ್ಮತೆಯನ್ನು ತಿಳಿಸುತ್ತೆ.

**ಚಿಗುರು:** ನಿಷ್ಪ್ರಯೋಜಕವಾದ ಜಡವಾದ ಮಾಯಾ ಭಾಗವನ್ನು ಬಿಟ್ಟು ಮೃದುತ್ವಾದಿ ಕಳಾ ಕಾಂತಿಯುತವಾದ ಶಿವಚೈತನ್ಯವಂ ಚಿಗುರಿಸುವುದು ವಿದಿತವಾಗುತ್ತದೆ.

**ಹಗುರು:** ಜಲಸ್ಥಲಾದಿಗಳಲ್ಲಿ ಊರ್ಧ್ವಗಾಮಿಯಾಗುತ್ತಿದ್ದುದು. ಮಾಯಾಸಂಸಾರದಲ್ಲಿ ಮುಳುಗದೆ ಪರವಸ್ತುವಂಸೇರುವುದು ಬೋಧಿತವಾಗುತ್ತದೆ.

ಛಂದಸ್ಸಿನಲ್ಲಿ ಲಘುವಿಗೆ ೧ ಮಾತ್ರೆ ಗುರುವಿಗೆ ೨ ಮಾತ್ರೆಗಳಿವೆ. ಆರಾಧನಾದಿ ಸಮಯದಲ್ಲಿ ಗುರುವಿಗೆ ದುಗುಣಿ ದಕ್ಷಿಣೆಯನ್ನೀವುದು ಸೂಚಿತವಾಗುತ್ತೆ. ಇತ್ಯಾದಿಯಾಗಿ ಯಾವವಿಧದಿಂದ ಶೋಧಿಸಿದರೂ " ಎತ್ತ ಕಚ್ಚಿದರೂ ಬೆಲ್ಲದಚ್ಚು ಸಿಹಿ ಎಂಬಂತೆ " ಗುರುಪದದ ಶ್ರೇಷ್ಠಾರ್ಥವು ಮೂರ್ತಿಮತ್ತಾಗಿದೆ.

ಗು ಎಂದರೆ ಅಜ್ಞಾನವು ರು ಎಂದರೆ ಅದನ್ನು ನಿವಾರಿಸುವುದು. ಗು ಎಂದರೆ ಗುಣಾತೀತವೂ ರು ಎಂದರೆ ರೂಪಾತೀತವೂ ಆದ ನಿಜ ತತ್ವಜ್ಞಾನವನ್ನು ನೀಡುವಾತನೇ ಗುರುವು. ಕೋಟಿ ಸೂರ್ಯರಿಂದ ನಿವಾರಿಸಲಶಕ್ಯವಾದ ಒಳಗಣ ಕತ್ತಲೆಯನ್ನು ನಿವಾರಿಸುವನು. ಸಿದ್ಧರಸ ಸ್ಪರ್ಶದಿಂದ ಲೋಹವು ಕಾಂಚನವಾಗುವಂತೆ ಗುರುಬೋಧೆಯಿಂದ ಶಿಷ್ಯನು ಶಿವಸ್ವರೂಪಿಯಾಗುವನು. ಸರ್ವರಿಗೂ ಆತ್ಮೀಯ ಮಾಯೆಯಿಂದ ಅಪ್ರತ್ಯಕ್ಷನಾದ ಮಹಾದೇವನೇ ಗುರುರೂಪದಿಂದ ಪ್ರತ್ಯಕ್ಷನಾಗಿರುವನು. ಶಾಸ್ತ್ರಾರ್ಥವನ್ನು ಸಂಗ್ರಹಿಸುತ್ತಾ ಅದು ವ್ಯವಹಾರದಲ್ಲಿ ಬರುವಂತೆ ಬೋಧಿಸುತ್ತಾ ತಾನೂ ಅದರಂತೆ ಆಚರಿಸುವನಾದ್ದರಿಂದ ಆಚಾರ್ಯನೆನಿಸುವನು. ಜ್ಞಾನದಿಂದ ಮೋಕ್ಷವನ್ನು ನಿರ್ದೇಶಿಸುವನಾದ್ದರಿಂದ ದೇಶಿಕ ನೆನಿಸುವನು.

ಸಪ್ತಕೋಟಿ ಮಹಾಮಂತ್ರಾ । ಶ್ಚಿತ್ತ ವಿಭ್ರಾಂತಕಾರಕಾಃ ।
ಏಕ ಏವ ಪರೋಮಂತ್ರೋ । ಗುರು ರಿತ್ಯಕ್ಷರದ್ವಯಂ ॥

ಟೀ॥ ಏಳುಕೋಟಿ ಮಹಾಮಂತ್ರಗಳು ಮನಸ್ಸಿಗೆ ಭ್ರಾಂತಿಯನ್ನುಂಟುಮಾಡತಕ್ಕವುಗಳಾಗಿವೆ, ಗುರುವೆಂಬ ಎರಡಕ್ಷರಗಳು ಮಾತ್ರ ಮುಖ್ಯಮಂತ್ರವಾಗಿದೆ.

" ಮಂತ್ರರಾಜ ಮಿದಂದೇವಿ | ಗುರುರಿತ್ಯಕ್ಷರದ್ವಯಂ " ಎಂತಲೂ " ಸಂಸಾ
ಸಾಗರ ಸಮುದ್ಧರಣೈ ಕಮಂತ್ರಂ | ಬ್ರಹ್ಮಾದಿ ದೇವ ಪರಿಪೂಜಿತ ಸಿದ್ಧಮಂತ್ರ
ದಾರಿದ್ರ್ಯದುಃಖ ಭವರೋಗ ವಿನಾಶಮಂತ್ರಂ | ವಂದೇ ಮಹಾಭಯಹರಂ ಗು
ರಾಜ ಮಂತ್ರಂ " ಎಂತಲೂ ಮುಂತಾಗಿ ಗುರುವೆಂಬ ಮಂತ್ರಾಕ್ಷರದ ಮ
ಮೆಯು ಹೇಳಲ್ಪಟ್ಟಿದೆ.

ಅತ್ರಿನೇತ್ರಃ ಶಿವಃಸಾಕ್ಷಾತ್ | ದ್ವಿಬಾಹುಶ್ಚಹರಿಃ ಸ್ಮೃತಃ |
ಅಚತುರ್ವದನೋಬ್ರಹ್ಮಾ | ಶ್ರೀಗುರುಃ ಕಥಿತಃಪ್ರಿಯೇ ||

ಟೀ|| ಎಲೋ ದೇವಿಯೇ ಶ್ರೀಗುರುವು ಮೂರುನೇತ್ರವಿಲ್ಲದ ಶಿವನೂ, ಎರ
ತೋಳುಳ್ಳ ವಿಷ್ಣುವೂ, ನಾಲ್ಮೊಗವಿಲ್ಲದ ಬ್ರಹ್ಮನೂ ಎನಿಸಿರುವನು " ಯಸ್ಮಾ
ತ್ಪರತರಂನಾಸ್ತಿ | ನೇತಿನೇತೀತಿ ವೈಶ್ರುತಿಃ " ಗುರುವಿಗಿಂತ ಬೇರೆ ಶ್ರೇಷ್ಠವ
ವಿಲ್ಲವೆಂಬುದಾಗಿ ವೇದವು ನೇತಿ ನೇತಿ ಎಂದು ಘೋಷಿಸುತ್ತಿದೆ.

ನಿತ್ಯಪೂರ್ಣಂ ನಿರಾಧಾರಂ | ನಿರ್ಗುಣಂ ಸ್ವಾತ್ಮಸಂಸ್ಥಿತಂ |
ವಂದೇಹಂ ಸಚ್ಚಿದಾನಂದಂ | ಭೇದಾತೀತಂ ಜಗದ್ಗುರುಂ ||

ನಿತ್ಯಪೂರ್ಣನೂ, ನಿರಾಧಾರನೂ, ಸ್ವಕೀಯ ಆತ್ಮಸಂಸ್ಥಿತನೂ, ಭೇ
ದೂರನೂ ಆದ ಸಚ್ಚಿದಾನಂದ ಜಗದ್ಗುರುವನ್ನು ವಂದಿಸುವೆನು.

ವಿಜಾನಂತಿ ಮಹಾವಾಕ್ಯಂ | ಗುರೋಶ್ಚರಣ ಸೇವಯಾ |
ತೇವೈಸನ್ಯಾಸಿನಃಪ್ರೋಕ್ತಾ | ಇತರೇ ವೇಷಧಾರಿಣಃ ||

ಟೀ|| ಗುರುವಿನಿಂದ ದೀಕ್ಷೆಹೊಂದಿದ ಯಾವ ಸನ್ಯಾಸಿಗಳು ಅಂತಪ್ಪ ಜಗದ್ಗು
ವಿನ ಚರಣಸೇವೆಯಿಂದ ತತ್ವಮಸ್ಯಾದಿ ಮಹಾವಾಕ್ಯವನ್ನು ಅರಿತುಕೊಳ್ಳು
ವರೋ ಅವರೇ ನಿಜವಾದ ಸನ್ಯಾಸಿಗಳು. ಈ ರೀತಿ ಆಚರಿಸದಿದ್ದರೆ ವೇಷಧಾ
ಗಳಾದ ಡಾಂಭಿಕ ಸನ್ಯಾಸಿಗಳೆನಿಸುವರು. ಎಂದು ಮುಂತಾಗಿ ಚತುರಾಶ್ರಮ
ಳಿಗೂ ಗುರುಸೇವೆಯೇ ಮುಖ್ಯವೆಂದೇ ಈ ಗುರುಗೀತೆಯು ಸತ್ಯಾರ್ಥವನ್ನು
ಸಾರುತ್ತಿದೆ.

ವಿ = ಎಂದರೆ ವೇದಾಂತ ವಿದ್ಯೆಯಲ್ಲಿ ರ = ಎಂದರೆ ರಮಿಸುವವರು.
ವಿ = ಎಂದರೆ ಶಿವಜೀವೈಕ್ಯವನ್ನು ಬೋಧಿಸುವ ವಿದ್ಯೆಯಲ್ಲಿರ = ಎಂದರೆ ರಮಿಸುವವರು.
ವಿ = ಎಂದರೆ ವಿಶೇಷವಾದ ಆತ್ಮವಿದ್ಯೆಯನ್ನು ರ= ಎಂದರೆ ದಾನಮಾಡುವವರು.
ವಿ = ಎಂದರೆ ವಿಶೇಷವಾಗಿ ದ್ರವ್ಯಾದಿಗಳನ್ನು ರ= ಎಂದರೆ ದಾನಮಾಡುವವರು.

ಹೀಗೆ ಜ್ಞಾನವೀರ, ದಾನವೀರರೆನಿಸಿದ ವೀರಶೈವರಿಗೆ ಅಭೇದ್ಯ ವಜ್ರಕವಚದಂತಿರುವ ಅಷ್ಟಾವರಣಗಳಲ್ಲಿ ಗುರುವೇ ಪ್ರಪ್ರಥಮವಾಗಿದ್ದಾನೆ. ಮತಧರ್ಮಕ್ಕೂ ಆದರ ಜ್ಞಾನಾಂಕುರಕ್ಕೂ ಬೀಜರೂಪನಾಗಿ ಅಜ್ಞಾನ ನಿವಾರಕನಾಗಿದ್ದಾನೆ. " ಮಠಶ್ಛಾತ್ರಾದಿ ನಿಲಯಃ " ಎಂಬ ಅಮರಸಿಂಹನ ಉಕ್ತಿಯಂತೆ ಗುರುಸ್ಥಲದ ಮಠಗಳು ಲಿಂಗಾಂಗ ಜ್ಞಾನವೆಂಬ ನಂದಾದೀಪಗಳಿಂ ಪ್ರಕಾಶಿಸುವ ಜ್ಯೋತಿರ್ಮಂದಿರಗಳಾಗಿವೆ. ಈ ಹಿಂದೆ ಪ್ರತಿ ಹಳ್ಳಿಗೂ ಮಠಗಳೇ ಶಾಲೆಗಳಾಗಿದ್ದುವು. ಹೀಗೆ ವೀರಶೈವ, ಗುರು, ಮಠ ಎಂಬ ಪದತ್ರಯಗಳು ಜ್ಞಾನ ಸಂಪತ್ತಿನ ನಿಧಿಗೆ ಅಂಜನ ತ್ರಯದಂತಿವೆ. ಇವುಗಳಲ್ಲಿ ಶ್ರೇಷ್ಠವಾದ ಗುರುವರ್ಗವು ಸಾತ್ವಿಕಗಳಾದ ಶಮ, ದಮ, ತಪಸ್ಸು, ಶೌಚ, ಋಜುತ್ವ ಬ್ರಹ್ಮಜ್ಞಾನಾದಿ ದೈವೀ ಸಂಪತ್ತಿನ ಬದಲು ತಾಮಸಗಳಾದ ಕ್ರೋಧ, ದಂಭ, ದರ್ಪ, ಅಜ್ಞಾನ ಮುಂತಾದ ಆಸುರೀ ಸಂಪತ್ತುಗಳಿಗೆ ಎಡೆಗೊಟ್ಟುದರಿಂದ ಗುರುಗಳ ವಿಷಯದಲ್ಲೀಗ ಸಮಾಜದ ಶ್ರದ್ಧೆಯು ಕಡಿಮೆಯಾಗತೊಡಗಿದೆ. ಸರ್ವಮತೀಯರಿಗೆ ಮೂಲಸ್ತಂಭವಾದ ಗುರುವರ್ಗವು "ಶಾಪಾದಪಿಶರಾದಪಿ " ಎನ್ನುವಂತೆ ತನ್ನ ತಪೋಬಲ ಜ್ಞಾನ ಬಲಾದಿಗಳಿಂದ ಗತ ವೈಭವವನ್ನು ಪಡೆಯಬೇಕು. ಆಗ ಈ ಕಲಿಕಾಲ ಕಲುಷಿತವಾದ ವಿಷಮ ವಾತಾವರಣವು ದೂರವಾಗುವದು. ಭಾರತದೇವಿಯ ಪಕ್ಕದಲ್ಲಿ ಧರ್ಮಜ್ಯೋತಿ ಜ್ಞಾನಜ್ಯೋತಿಯ ನಂದಾದೀಪಗಳು ಅಖಂಡವಾಗಿ ಬೆಳಗಬೇಕು. ಆಗ ವಿಶ್ವದಲ್ಲಿ ಶಾಶ್ವತ ಸುಖಶಾಂತಿಗಳು ಲಭಿಸುವವು. ಶ್ರೀಗುರು ಸಾರ್ವಭೌಮನು ಹೃದಯದಲ್ಲಿ ಭಕ್ತಿ, ಜ್ಞಾನ, ವೈರಾಗ್ಯವೆಂಬ ರತ್ನತ್ರಯದ ಪದಕದಿಂದಲೂ ಮುಕ್ತಿ ಕಿರೀಟದಿಂದಲೂ, ತಪೋಬಲವೆಂಬ ದಂಡದಿಂದಲೂ, ರಾಜಯೋಗ ಮುದ್ರೆಯ ರಾಜ ಮುದ್ರಿಕೆಯಿಂದಲೂ, ಸುನೀತಿ ಸದಾಚಾರಗಳೆಂಬ ಪಾದುಕೆಗಳಿಂದಲೂ ಶೋಭಿಸುವನು. ಧೃತಿ, ಕ್ಷಮಾ, ದಮ, ಅಸ್ತೇಯ, ಶೌಚ, ಇಂದ್ರಿಯ ನಿಗ್ರಹ, ಧೀ,

ವಿದ್ಯಾ, ಅಕ್ರೋಧಾದಿಗಳು ಈತನ ಧರ್ಮ ಸಾಮ್ರಾಜ್ಯವನ್ನು ಬಲವಾಗಿ ಸುವ ರಾಜ್ಯಾಂಗಗಳಂತಿವೆ. ಪೂರ್ವದಲ್ಲಿ ಮೂಲೋಕದ ರಾಜಾಧಿರಾಜರುಗ ಸಹ ತಮಗೂ, ರಾಜ್ಯಕ್ಕೂ, ಆಧಿಭೌತಿಕ ಆಧ್ಯಾತ್ಮಿಕ ಸುಖಪ್ರಾಪ್ತಿಗಾಗಿ ಬ್ರ ನಿಷ್ಠನಾದ ಕುಲಗುರುವನ್ನಾಶ್ರೈಸಿಕೊಂಡಿದ್ದರು. ಸ್ವರ್ಗದ ದೇವರಾಜ ಬೃಹಸ್ಪತಿಯೂ ಪಾತಾಳದ ರಾಕ್ಷಸರಾಜನಿಗೆ ಶುಕ್ರನೂ, ಸೂರ್ಯವಂಶದ ರಾಜ ವಸಿಷ್ಠನೂ, ಚಂದ್ರವಂಶದ ರಾಜರಿಗೆ ಧೌಮ್ಯನೂ, ಜನಕರಾಜನಿಗೆ ಯಾ ವಲ್ಕ್ಯನೂ, ಜನಮೇಜಯನಿಗೆ ವೈಶಂಪಾಯನನೂ ಗುರುವಾಗಿ ರಾಜ್ಯದ ನಿರಂ ಶಾಧಿಕಾರಕ್ಕೆ ವಿವೇಕವೆಂಬ ಕಡಿವಾಣವನ್ನು ಹಾಕಿ ರಾಜ ಪ್ರಜೆಗಳೀರ್ವರನ್ನು ಸನ್ಮಾರ್ಗದಲ್ಲಿ ನಡೆಯಿಸುತ್ತಾ ರಾಷ್ಟ್ರದ ಶ್ರೇಯಸ್ಸಿಗೂ, ಪ್ರೇಯಸ್ಸಿಗೂ ಕಾ ರಾಗಿ ವಿಶ್ವಬಂಧುಗಳೂ ವಿಶ್ವವಂದ್ಯರೂ ಆಗಿದ್ದರು.

ಇಂತಹ ಗುರು ಮಹತ್ವವನ್ನು ಕರತಲಾಮಲಕದಂತೆ ಸಾಂಗವಾಗಿ ವಿ ಸುವ ಈ ಗುರುಗೀತೆಯು ಗ್ರಂಥರಾಜವೆನಿಸಿದೆ.

ಗುರುಗೀತಾಕ್ಷರೈಕೈಕಂ । ಮಂತ್ರರಾಜಮಿದಂಪ್ರಿಯೇ ।
ಅನ್ಯೇಚ ವಿವಿಧಾಮಂತ್ರಾಃ । ಕಲಾಂನಾರ್ಹಂತಿಷೋಡಶೀಂ ॥

ಟೀ॥ ಎಲೌ ಪ್ರಿಯಳೇ ! ಈ ಗುರುಗೀತೆಯ ಪ್ರತಿಯೊಂದಕ್ಷರವೂ ಮಂತ್ರರಾ ವೆನಿಸಿದೆ. ಇತರ ನಾನಾವಿಧ ಮಂತ್ರಗಳು ಈ ಗ್ರಂಥದ ಒಂದಾಣೆ ಭಾಗ ಸಮಾನವಾಗವು.

ಕಾಮಿತಾನಾಂ ಕಾಮಧೇನುಃ । ಕಲ್ಪಿತೇ ಕಲ್ಪಪಾದಪಃ ।
ಚಿಂತಾಮಣಿಶ್ಚಿಂತಿತಸ್ಯ । ಸರ್ವಮಂಗಳದಾಯಕಃ ॥

ಟೀ॥ ಈ ಗುರುಗೀತೆಯು ಕಾಮಿತಗಳಿಗೆ ಕಾಮಧೇನುವೂ, ಕಲ್ಪಿತವಾದ ಬಯ ಗಳಿಗೆ ಕಲ್ಪವೃಕ್ಷವೂ, ಚಿಂತಿತಾರ್ಥಗಳಿಗೆ ಚಿಂತಾಮಣಿಯೂ, ಎನಿಸಿ ಸರ್ವಮ ಗಲಗಳನ್ನುಂಟುಮಾಡುವಂತಹದಾಗಿದೆ. " ಗುರುಗೀತಾಸಮಂಸ್ತೋತ್ರಂ । ನಾ ತತ್ವಂ ಗುರೋಃಪರಂ " ಎಂದು ಮುಂತಾಗಿ ಹೇಳಿರುವ ಗುರುಗೀತೆಯ ಶ್ರೇ ತೆಯು ಯಥಾರ್ಥವಾಗಿದೆ. ಪರಮ ಪವಿತ್ರವೂ, ನಿತ್ಯಪಾರಾಯಣ ಯೋಗ್ಯವ

ಆದ ಈ ಗುರುಗೀತೆಯು ಬೇರೆಕಡೆ ಅಚ್ಚಾಗಿದ್ದರೂ, ಹೆಚ್ಚಾಗಿ ಅಕ್ಷರ, ಪದ, ವಾಕ್ಯಾದಿ ಪ್ರಮಾದಗಳಿವೆ. ಇದರ ಬೇರೆಬೇರೆ ಮೂರು ಪ್ರತಿಗಳನ್ನು ಸಂಗ್ರಹಿಸಿ ಸಾಧ್ಯವಾದಷ್ಟು ತಪ್ಪುಗಳನ್ನು ತಿದ್ದಿ ಗ್ರಂಥವು ಸಂಪೂರ್ಣಗೊಳಿಸಲ್ಪಟ್ಟಿದೆ. ಮೂಲಸಂಸ್ಕೃತ ಶ್ಲೋಕಗಳನ್ನು ಕೊನೆಯ ಭಾಗದಲ್ಲಿಯೂ, ಅದರ ಅನುವಾದಗಳಾದ ಕಂದಪದ್ಯ, ಷಟ್ಪದಿಗಳನ್ನು ಮೊದಲ ಭಾಗದಲ್ಲಿಯೂ ಪ್ರಕಟಿಸಿರುತ್ತದೆ. ಉದಾರಿಗಳಾದ ವಾಚಕರು ಪ್ರೋತ್ಸಾಹಿಸಿ ಯೋಗ್ಯ ಸಲಹೆಯನ್ನಿತ್ತಲ್ಲಿ ಮುಂದಣ ಆವೃತ್ತಿಗೆ ಸರಿಪಡಿಸಲಾಗುವುದೆಂದು ತಿಳಿಪಡಿಸುವ,

ಉಭಯ ಕವಿತಾವಿಭೂಷಣ,
ಅಮರನಾಥಶಾಸ್ತ್ರೀ ವಿದ್ವಾನ್ ಹಿರೇಮಠ
ಬನ್ನಿಗೋಳ (ನಿವೃತ್ತ ಹೈಸ್ಕೂಲು ಕನ್ನಡ ಪಂಡಿತ)

ಶ್ರೀ ಪ್ರಭು ಸ್ವಾಮಿ,
ಸಂಸ್ಕೃತ ಮಹಾ ಪಾಠಶಾಲಾ ಪ್ರಾಧ್ಯಾಪಕ.
ಕಂಪ್ಲಿ.

ವೇದವೇದಾಂಗ ವೇದಾಂತ । ಸಿದ್ಧಾಂತಾರ್ಥ ಪ್ರಬೋಧಕಃ ॥
ವಿದ್ವದ್ರಾಜೋ ವಿಜಯತಾಂ । ಶ್ರೀಕಂಠಾರಾಧ್ಯಸದ್ಗುರುಃ ॥

ನನ್ನ ಪರಮಪೂಜ್ಯ ವಿದ್ಯಾಗುರುಗಳೂ, ಜವಳಗೇರಿ ಮಠಾಧೀಶರೂ ಆದ ಕೈ॥ ಪಂಡಿತರಾಜ ಶ್ರೀ ಶ್ರೀ ಶ್ರೀಕಂಠಶಾಸ್ತ್ರಿಗಳ ಪಾದ ಸನ್ನಿಧಿಯಲ್ಲಿ ಈ ಕನ್ನಡ ಗುರುಗೀತೆಯನ್ನು ಭಕ್ತಿಗಾಣಿಕೆಯನ್ನಾಗಿ ಸಮರ್ಪಿಸಿರುವೆನು.

ಸಾರಸ್ವತ ಸೇವಕ
ಬಿ. ಹೆಚ್. ಎಂ. ಅಮರನಾಥಶಾಸ್ತ್ರಿ
ಕಂಪ್ಲಿ.

---

—॥ ಓಂ ಸದ್ಗುರು ಪರಬ್ರಹ್ಮಣೇನಮಃ ॥—

ಶ್ರೀ ಜಾತವೇದಸೇ ಗುರುವೇನಮಃ ॥ ಶ್ರೀ ಸ್ಕಾಂದ ಪುರಾಣದಲ್ಲಿ ಉತ್ತರ ಭಾಗದಲ್ಲಿಯ ಕನ್ನಡ ಗುರುಗೀತೆ ಮೊದಲೋಳ್ "ಶ್ರೀಗುರುಪಾದಪೂಜಾವಿಧಾನಂ"

ಓಂ ಶಿವಶಿವ ಶಂಭೋರಾಜ್ಞಯಾ ಪ್ರವರ್ತಮಾನಸ್ಯಾದ್ಯ ಬ್ರಹ್ಮಣೋ ದ್ವಿತೀಯ ಪರಾರ್ಧೇ ಶ್ರೀ ಶ್ವೇತವರಾಹಕಲ್ಪೇ ವೈವಸ್ವತ ಮನ್ವಂತರೇ ಕಲಿ ಯುಗೇ ಪ್ರಥಮಪಾದೇ ಭರತವರ್ಷೇ ಭರತಖಂಡೇ ಜಂಬೂದ್ವೀಪೇ ಮೇರೋ ರ್ದಕ್ಷಿಣ ದಿಗ್ಭಾಗೇ ದಂಡಕಾರಣ್ಯೇ ಗೋದಾವರ್ಯಾಃ ದಕ್ಷಿಣತೀರೇ ಶಾಲಿವಾಹನ ಶಕೇ ಬೌದ್ಧಾವತಾರೇ ಶ್ರೀ ಪಂಪಾ ಸಂಪದ್ಭೂಮ್ಯಾಂ ಅಸ್ಮಿನ್ ವರ್ತಮಾನೇ ವ್ಯಾವಹಾರಿಕ ಚಾಂದ್ರಮಾನೇನ ಪ್ರಭವಾದಿ ಷಷ್ಠಸಂವತ್ಸರಾಣಾಂ ಮಧ್ಯೇ... .... ಸಂವತ್ಸರೇ ಅಮುಕಾಯನೇ ಅಮುಕಋತೌ ಅಮುಕಮಾಸೇ ಅಮುಕಪಕ್ಷೇ ಶುಭವಾಸರೇ ಶುಭನಕ್ಷತ್ರೇ ಶುಭಯೋಗೇ ಶುಭಕರಣೇ ಏವಂ ಗುಣವಿಶೇಷಣ ವಿಶಿಷ್ಟಾಯಾಂ ಅಸ್ಯಾಂ ಶುಭತಿಥೌ ಶುಭಫಲ ಪ್ರದಾರ್ಥಂ ಸಕಲ ಕಾಮ್ಯಾರ್ಥ ಸಿದ್ಧ್ಯರ್ಥಂ ಶ್ರೀ ಸಾಂಬಸದಾಶಿವ ಪ್ರೀತ್ಯರ್ಥಂ ಶ್ರೀ ಗುರುಗೀತಾ ಪಠನ ಫಲಪ್ರಾ ಪ್ತ್ಯರ್ಥಂ ಪಂಚಮುದ್ರಾ ಭೂಷಿತ ಶ್ರೀ ಗುರುವರೇಂದ್ರ ಶಿವಾಚಾರ್ಯ ಮಹಾ ಸ್ವಾಮಿನಾಂ ಪಾದಪೂಜಾಂ ಕರಿಷ್ಯೇ. ಇತಿ ಸಂಕಲ್ಪ್ಯ.

ನಿರ್ವಿಘ್ನತಾ ಸಿದ್ಧ್ಯರ್ಥಂ "ಗಣಪತಿ ಧ್ಯಾನಂ" । ಶ್ರೀಗಣೇಶ ನಮಸ್ತುಭ್ಯಂ । ಸರ್ವವಿದ್ಯಾಪ್ರದಾಯಕ ।"ಕಾರ್ಯಾರಂಭೇ ಪೂಜಯಾಮಿ।ಸರ್ವವಿಘ್ನ ನಿವಾರಣ॥" ಇತಿಧ್ಯಾನಪೂರ್ವಕಂ ತತ್ಪೂಜಾಂ ಕಾರಯೇತ್ ॥

## ಶ್ರೀಗುರು ಪಾದಪೂಜೆಯ ಉಪಚಾರ ಮಂತ್ರಗಳು.

ಓಂ ಧ್ಯಾಯಾಮಿ । ಧ್ಯಾನಂ ಸಮರ್ಪಯಾಮಿ ॥ ಓಂ ಆವಾಹಯಾಮಿ । ಆಸನಂ ಸಮರ್ಪಯಾಮಿ ॥ ಪಾದಯೋಃ ಪಾದ್ಯಂ ಸಮರ್ಪಯಾಮಿ ॥ ಹಸ್ತಯೋ ರರ್ಘ್ಯಂ ಸಮರ್ಪಯಾಮಿ ॥ ಮುಖೇ ಆಚಮನೀಯಂ ಸಮರ್ಪಯಾಮಿ ॥ ಭಸ್ಮ = ಅನಾದಿ ಶಾಶ್ವತಂ ಶಾಂತಂ । ವ್ಯೋಮಾತೀತಂ ನಿರಂಜನಂ ॥ ಚಿದ್ಭಸ್ಮ

ವೃಷಭಾ ಕಾರಂ । ಚಿದಂಗಂ ಭಸ್ಮಧಾರಣಂ ॥ ಶ್ರೀಗುರವೇನಮಃ ಭಸ್ಮ ಧಾರಣಂ ಕರೋಮಿ ॥ ಗಂಧಂ = ಗಂಧದ್ವಾರಾಂ ದುರಾಧರ್ಷಾಂ । ನಿತ್ಯ ಪುಷ್ಟಾಂಕರೀಷಿಣೀಂ ॥ ಈಶ್ವರೀ ಂ ಸರ್ವಭೂತಾನಾಂ । ತಾಮಿಹೋಪಹ್ವಯೇ ಶ್ರೀಯಂ ॥ ಶ್ರೀಗುರವೇನಮಃ ಗಂಧಂಧಾರಯಾಮಿ ॥ ಅಕ್ಷತಂ = ಅಕ್ಷತಾನ್ ಧವಳಾಕಾರಾನ್ । ತಿಲತಂಡುಲ ಮಿಶ್ರಿತಾನ್ ॥ ಅರ್ಪಯಾಮಿ ಸದಾದೇವ । ಸ್ವೀಕುರು ಶ್ರೀ ಜಗದ್ಗುರೋ ॥ ಶ್ರೀ ಗುರವೇನಮಃ ಅಕ್ಷತಾನ್ ಧಾರಯಾಮಿ ॥ ಪತ್ರಪುಷ್ಪಾಣಿ = ಸೇವಂತಿಕಾ ಬಕುಲ ಚಂಪಕ ಪಾಟಲಾಬ್ಜೈಃ । ಪುನ್ನಾಗಜಾಜಿ ಕರವೀರರಸಾಲ ಪುಷ್ಪೈಃ ॥ ಬಿಲ್ವಪ್ರವಾಳ ತುಲಸೀದಳ ಮಾಲಿಕಾಭಿಃ । ತ್ವಾಂಪೂಜಯಾಮಿ ಜಗದೀಶ್ವರಮೇ ಪ್ರಸೀದ ॥ ಶ್ರೀ ಗುರವೇ ನಮಃ ನಾನಾವಿಧ ಪತ್ರಪುಷ್ಪಾಣಿ ಸಮರ್ಪಯಾಮಿ ॥ ಧೂಪಂ = ದಶಾಂಗ ಗುಗ್ಗುಲೋಪೇತಂ । ಸುಗಂಧಂಚ ಮನೋಹರಂ ॥ ಧೂಪಯಾಮಿ ಗುರುಶ್ರೇಷ್ಠ । ಪ್ರೀತ್ಯರ್ಥಂ ಪ್ರತಿಗೃಹ್ಯತಾಂ ॥ ಶ್ರೀ ಗುರವೇನಮಃ ಧೂಪಮಾಘ್ರಾಪಯಾಮಿ ॥ ದೀಪಂ ಸಾಜ್ಯಂ ತ್ರಿವರ್ತಿ ಸಂಯುಕ್ತಂ । ವಹ್ನಿನಾಯೋಜಿತಂ ಮಯಾ ॥ ಗೃಹಾಣ ಮಂಗಳಂ ದೀಪಂ । ತ್ರೈಲೋಕ್ಯತಿ ಮಿರಾಪಹಂ ॥ ಶ್ರೀ ಗುರವೇನಮಃ ದೀಪಂ ನೀರಾಜಯಾಮಿ ॥ ಕರ್ಪೂರ ದೀಪಂ = ಕರ್ಪೂರ ಗೌರಂ ಕರುಣಾವತಾರಂ । ಸಂಸಾರ ಪಾರಂ ಭುಜಗೇಂದ್ರ ಹಾರಂ ॥ ಸದಾ ವಸಂತಂ ಹೃದಯಾರವಿಂದೇ । ಭವಂ ಭವಾನೀ ಸಹಿತಂ ನಮಾಮಿ ॥ ಶ್ರೀ ಗುರವೇನಮಃ ಕರ್ಪೂರ ದೀಪಂ ನೀರಾಜಯಾಮಿ ॥ ನೈವೇದ್ಯಂ = ನೈವೇದ್ಯಂ ಷಡ್ರಸೋಪೇತಂ । ದಧಿಮಧ್ವಾಜ್ಯ ಸಂಯುತಂ ॥ ನಾನಾಭಕ್ಷ್ಯ ಫಲೋಪೇತಂ । ಗೃಹಾಣ ಗುರುಪುಂಗವ ॥ ಶ್ರೀ ಗುರವೇನಮಃ ನೈವೇದ್ಯಂ ನಿವೇದಯಾಮಿ ॥ ಪಾನೀಯಂ = ಘನಸಾರ ಸುಗಂಧೇನ ಮಿಶ್ರಿತಂ ಪುಷ್ಪವಾಸಿತಂ ॥ ಗುರೋಗೃಹಾಣ ಪಾನೀಯಂ । ಶೀತಲಂ ಸುಮನೋಹರಂ ॥ ಶ್ರೀ ಗುರವೇನಮಃ ಪಾನೀಯಂ ಸಮರ್ಪಯಾಮಿ ॥ ತಾಂಬೂಲಂ = ಪೂಗೀಫಲ ಸಮಾಯುಕ್ತಂ । ನಾಗವಲ್ಲೀದಳೈರ್ಯುತಂ ॥ ಕರ್ಪೂರ ಚೂರ್ಣ ಸಂಯುಕ್ತಂ । ತಾಂಬೂಲಂ ಪ್ರತಿಗೃಹ್ಯತಾಂ ॥ ಶ್ರೀ ಗುರವೇನಮಃ ತಾಂಬೂಲಂ ಸಮರ್ಪಯಾಮಿ ॥ ದಕ್ಷಿಣಾ = ಹಿರಣ್ಯಗರ್ಭ ಗರ್ಭಸ್ಥಂ । ಹೇಮಬೀಜಂ ವಿಭಾವಸೋಃ ॥ ಅನಂತ ಪುಣ್ಯಫಲದಂ । ಅತಃಶಾಂತಿಂ ಪ್ರಯಚ್ಛಮೇ ॥ ಶ್ರೀ ಗುರವೇನಮಃ ಹಿರಣ್ಯ ದಕ್ಷಿಣಾಂ ಸಮರ್ಪಯಾಮಿ ॥ ಶ್ರೀಮದ್ಗುರು ಪ್ರೀತ್ಯರ್ಥಂ ಪುನರರ್ಘ್ಯಂ ಸಮರ್ಪಯಾಮಿ ॥

ಛತ್ರಂ ಚಾಮರ ಸಂಯುತಂ ವ್ಯಜನಕಂ ಭದ್ರಂ ಧ್ವಜಂ ದರ್ಪಣಂ। ವೀಣಾ ಭೇರಿ ಮೃದಂಗ ಕಾಹಳಯುತಂ ಗೀತಂಚ ನೃತ್ಯಂ ತಥಾ ॥ ಸಾಷ್ಟಾಂಗ ಪ್ರಣತಿಂ ಶ್ರುತಿ ಸ್ತುತಿಯುತಂಹ್ಯೇ ತತ್ಸಮಸ್ತಂ ಮಯಾ । ಸಾಕಲ್ಯೇನ ಸಮರ್ಪಿತಂ ತವವಿಭೋ ಪೂಜಾಂಗುರೋ ಸ್ವೀಕುರು ॥ ಶ್ರೀ ಗುರವೇನಮಃ ನಾನಾವಿಧೋಪಚಾರಂ ಸಮರ್ಪಯಾಮಿ ॥ ನಮಸ್ಕಾರಂ = ಉರಸಾ ಶಿರಸಾದೃಷ್ಟ್ವಾ ಮನಸಾ ಶ್ರದ್ಧಯಾತಯಾ ॥ ಪದ್ಭ್ಯಾಂಕರಾಭ್ಯಾಂ ಕರ್ಣಾಭ್ಯಾಂ । ಸಾಷ್ಟಾಂಗಃ ಪ್ರಣಮಾಮ್ಯಹಂ ॥ ಶ್ರೀ ಗುರವೇನಮಃ ಸಾಷ್ಟಾಂಗ ನಮಸ್ಕಾರಂ ಕರೋಮಿ। ಪ್ರದಕ್ಷಿಣಂ = ಯಾನಿಕಾನೀಹ ಪಾಪಾನಿ । ಜನ್ಮಾಂತರ ಕೃತಾನಿಚ ॥ ತಾನಿತಾನಿ ಪ್ರಣಶ್ಯಂತಿ । ಪ್ರಾದಕ್ಷಿಣ್ಯಾತ್ ಪದೆಪದೇ ॥ ಶ್ರೀ ಗುರವೇನಮಃ ಪ್ರದಕ್ಷಿಣಂ ಕರೋಮಿ ॥ ಪ್ರಾರ್ಥನಾ = ಪಾಪೋಽಹಂ ಪಾಪಕರ್ಮಾಗಹಂ । ಪಾಪಾತ್ಮಾ ಪಾಪಸಂಭವಃ ॥ ತ್ರಾಹಿಮಾಂ ಕೃಪಯಾಸ್ವಾಮಿನ್ । ಸ ರ್ವ ಪಾ ಪ ಹ ರೋ ಭವಾನ್ ॥ ಶ್ರೀ ಗುರವೇನಮಃ ಪ್ರಾರ್ಥನಾಂ ಸಮರ್ಪಯಾಮಿ ॥

ಅಥ ಮಾನಸೋಪಚಾರ ಪಂಚಕ ಸಮರ್ಪಣಂ ॥ ಲಂ ಪೃಥಿವ್ಯಾತ್ಮನೇ ಗಂಧತನ್ಮಾತ್ರಾ ಪ್ರಕೃತ್ಯಾನಂದಾತ್ಮನೇ ಶ್ರೀ ಗುರುದೇವಾಯ ನಮಃ ಗಂಧಃ ಸಮರ್ಪಯಾಮಿ ॥ ಹಂ ಆಕಾಶಾತ್ಮನೇ ಶಬ್ದತನ್ಮಾತ್ರಾ ಪ್ರಕೃತ್ಯಾನಂದಾತ್ಮನೇ ಶ್ರೀಗುರುದೇವಾಯ ನಮಃ ಆಕಾಶಾತ್ಮಕಂ ಪುಷ್ಪಂ ಸಮರ್ಪಯಾಮಿ ॥

ಯಂವಾಯ್ವಾತ್ಮನೇ ಸ್ಪರ್ಶತನ್ಮಾತ್ರಾ ಪ್ರಕೃತ್ಯಾನಂದಾತ್ಮನೇ ಶ್ರೀ ಗುರುದೇವಾಯನಮಃ ವಾಯ್ವಾತ್ಮಕಂ ಧೂಪಂ ಸಮರ್ಪಯಾಮಿ ॥ ರಂತೇಜ ಆತ್ಮನೇ ರೂಪತನ್ಮಾತ್ರಾ ಪ್ರಕೃತ್ಯಾನಂಧಾತ್ಮನೇ ಶ್ರೀ ಗುರುದೇವಾಯನುಮಃ ತೇಜ ಆತ್ಮಕಂದೀಪಂ ಸಮರ್ಪಯಾಮಿ ॥ ವಂ ಅಬಾತ್ಮನೇ ರಸತನ್ಮಾತ್ರಾ ಪ್ರಕೃತ್ಯಾನಂದಾತ್ಮನೇ ಶ್ರೀ ಗುರುದೇವಾಯ ನಮಃ ಅಬಾತ್ಮಕಂ ನೈವೇದ್ಯಂ ಸಮರ್ಪಯಾಮಿ। ಸಂಸರ್ವಾತ್ಮನೇ ಸರ್ವತನ್ಮಾತ್ರಾ ಪ್ರಕೃತ್ಯಾನಂದಾತ್ಮನೇ ಶ್ರೀಗುರು ದೇವಾಯ ನಮಃ ಸರ್ವಾತ್ಮಾಕಾನ್ ಸರ್ವೋಪಚಾರಾನ್ ಸಮರ್ಪಯಾಮಿ ॥

ಇತಿ - ಮಾನಸಪೂಜಾ

ಅಥ ಶ್ರೀಗುರು ಮೂಲಮಂತ್ರಃ ॥ ಓಂನಮಃ ಶ್ರೀಗುರುದೇವಾಯ ಪರಮ ಪುರುಷಾಯ ಸರ್ವದೇವತಾ ವಶೀಕರಾಯ ಸರ್ವಾರಿಷ್ಟ ವಿನಾಶಾಯ ಸರ್ವಮಂತ್ರ ಚ್ಛೇದನಾಯ ತ್ರೈಲೋಕ್ಯಂ ವಶಮಾನಯಸ್ವಾಹಾ ॥

ಓಂ ಅಸ್ಯ ಶ್ರೀ ಗುರುಗೀತಾ ಸ್ತೋತ್ರಮಾಲಾ ಮಂತ್ರಸ್ಯ। ಭಗವಾನ್ ಸದಾಶಿವೋ ಋಷಿಃ । ನಾನಾವಿಧಾನಿ ಛಂದಾಂಸಿ। ಶ್ರೀ ಗುರುಃ ಪರಮಾತ್ಮಾ ದೇವತಾ । ಹಂಬೀಜಂ। ಸಃಶಕ್ತಿಃ । ಸೋಹಂ ಕೀಲಕಂ। ಶ್ರೀ ಸಮಸ್ತ ಗುರು ಮಂಡಲ ಸಿದ್ಧ್ಯರ್ಥೇ। ಜಪೇ ವಿನಿಯೋಗಃ ॥

## ಅಥ ಕರನ್ಯಾಸಃ ॥

ಓಂ ಹಂ ಸಾಂ ಸೂರ್ಯಾತ್ಮನೇ ಅಂಗುಷ್ಟಾಭ್ಯಾಂನಮಃ ।
ಓಂ ಹಂ ಸೀಂ ಸೋಮಾತ್ಮನೇ ತರ್ಜನೀಭ್ಯಾಂ ನಮಃ ।
ಓಂ ಹಂ ಸೂಂ ಆಗ್ನೇಯಾತ್ಮನೇ ಮಧ್ಯಮಾಭ್ಯಾಂ ನಮಃ ।
ಓಂ ಹಂ ಸೈಂ ನಿರಂಜನಾತ್ಮನೇ ಅನಾಮಿಕಾಭ್ಯಾಂ ನಮಃ ।
ಓಂ ಹಂ ಸೌಂ ನಿರಾಭಾಸಾತ್ಮನೇ ಕನಿಷ್ಠಿಕಾಭ್ಯಾಂ ನಮಃ ।
ಓಂ ಹಂ ಸಃ ಅವ್ಯಕ್ತಾತ್ಮನೇ । ಅಂತಃ ಸೂಕ್ಷ್ಮಾತ್ಮನೇ ।
ಪ್ರಚೋದಯಾತ್ ಕರತಲ ಕರಪೃಷ್ಟಾಭ್ಯಾಂ ನಮಃ ॥ ಇತಿ ಕರನ್ಯಾಸಃ ॥

## ಅಥ ಹೃದಯಾದಿನ್ಯಾಸಃ ॥

ಓಂ ಹಂ ಸಾಂ ಸೂರ್ಯಾತ್ಮನೇ ಹೃದಯಾಯನಮಃ ।
ಓಂ ಹಂ ಸೀಂ ಸೋಮಾತ್ಮನೇ ಶಿರಸೇಸ್ವಾಹಾ ।
ಓಂ ಹಂ ಸೂಂ ಆಗ್ನೇಯಾತ್ಮನೇ ಶಿಖಾಯೈವಷಟ್ ।
ಓಂ ಹಂ ಸೈಂ ನಿರಂಜನಾತ್ಮನೇ ಕವಚಾಯಹುಂ ।
ಓಂ ಹಂ ಸೌಂ ನಿರಾಭಾಸಾತ್ಮನೇ ನೇತ್ರತ್ರಯಾಯ ವೌಷಟ್ ।
ಓಂ ಹಂ ಸಃ ಅವ್ಯಕ್ತಾತ್ಮನೇ । ಅಂತಃಸೂಕ್ಷ್ಮಾತ್ಮನೇ ಪ್ರಚೋದಯಾತ್ ಅಸ್ತ್ರಾಯಫಟ್ ॥ ಓಂ ಭೂರ್ಭುವಃಸುವರೋಂ ಇತಿದಿಗ್ಬಂಧಃ ॥

## ಅಥಧ್ಯಾನಂ ॥ ಭಾಮಿನೀಷಟ್ಪದಿ ॥

ಹಂಸವೃತ ದಿವ್ಯಾಂಬುಜಗಳಿಂ ।
ಮುಂಸದಾ ಜಗದಾದಿಕಾರಣ ।

ತಾಂ ಸಕಲ ದೇಹಾಲಯಂ ಚಿನ್ಮನರಸಂ ಸ್ವೇಚ್ಛಂ ||
ಓಂ ಸದಾನಂದಾತ್ಮಕಂ ಪರ |
ಹಂಸ. ಸಾಕ್ಷಾದಕ್ಷರಾಂಗಂ |
ಶಂಸಿಪೇಂ ಭಾವೈಕದೀಪಾಂಕುರವ ಗುರುಪದವ || ೧ ||
ನಿತ್ಯನವಮಲಂ ನಿಷ್ಕಲಂ ಸಲೆ |
ನಿತ್ಯವರಳಿದ ಸಾಸಿರದ ದಳ |
ವೆತ್ತಕಮಲದ ಮಂಟಪದಿ ಲುಪ್ತಾಕ್ಷರದಿ ಮೆರೆವ |
ಸತ್ಯಸುಖಮಯ ಸುಖದಮಂದಿರ |
ಸತ್ಯ ಸುಂದರ ಶಿವನ ಪರತರ |
ನೆತ್ತಲುಂ ಸುತ್ತಿರ್ದ ಗುರುಪರಹಂಸನಂ ಭಜಿಪೇಂ || ೨ ||
ಅತಿ ವಿಭವ ನುನ್ಮಥಿತ ವೇದಂ |
ಶ್ರುತಿ ಶಿರೋಗುರು ಬೋಧಭುವನಂ |
ಸತತ ಷಟ್ಚಕ್ರದಿ ಚರಿಪ ನದ್ವೈತನತಿ ಶಾಂತಂ |
ಯತಿವಿನುತ ನೋಂಕಾರ ಪೀಠಂ |
ವಿತತ ಶಿವಲಿಂಗ ಪ್ರಕಾಶಂ |
ನತಮನಶ್ಚೈತನ್ಯ ಚಂದ್ರೋದಯ ಗುರುವನಮಿಪೇಂ || ೩ ||
ಮೊದಲಮೂರ್ ಶ್ರೀನಾಥ ಪೀಠಂ |
ಮೃದುಲ ಗಣಪತಿ ಪೀಠಮೂರುಂ |
ಅದುವೆ ಭೈರವಿ ಪೀಠಮೂರುಂ ಸಿದ್ಧವಟುಕಂ ಮೂರ್ |
ವಿದಿತ ನಾಲ್ಕೈದಾರು ಗುರುಗಳ್ |
ಚದುರ ವೀರಾದ್ಯಷ್ಟ ನವಕರ್ |
ಮುದದಿ ಮಾಲಿನಿ ಮಂತ್ರವಿಭು ಗುರುಮಂಡಲವ ನಮಿಪೇಂ || ೪ ||
ಕಂದ|| ಪೊಡಮಡುವೆ ನಡಿಗೆ ಮುಡಿಯಿಂ |
ಮೃಡರೂಪಂ ಶಾಂತಮೂರ್ತಿಯಂ ಸದ್ಗುರುವಂ |
ದೃಢಯೋಗಾಸನ ರತನಂ |
ಪಡೆಯಲ್ ಸನ್ಮುಕ್ತಿ ಕಾಮ್ಯಸಿದ್ಧಿಗಳಂ ನಾಂ || ೫ ||
ಸ್ಮರಿಪುದು ಮುಂಜಾವಿನೊಳಾ |

ಶಿರದರಮನೆ ಸಾಸಿರೆಸಳ ಬೆಳ್ದಾವರೆಯೋಳ್ ||
ಎರಡು ಕಣ್ಣೆರಡು ತೋಳಿಹ |
ಗುರುವರನಂ ಶಾಂತನಂ ವರಾಭಯಕರನಂ || ೬ ||
ನಗೆಮೊಗಗಣ್ಣಿನ ಸೊಬಗಂ |
ಸೊಗದೊಡೆಯಂ ಸರ್ವದೇವತಾ ಮೂರ್ತಿಯುತಾಂ ||
ಬಗೆವುದು ಪಾದೋದಕದಿಂ |
ದೊಗೆವಾಧಾರೆಯನು ಶಿರದಮೇಲಿಳಿಯುವದಂ || ೭ ||
ತೊಳೆವುದು ಪಾದೋದಕದಿಂ |
ದೊಳಹೊರಗಣ ಮಲಗಳೆಲ್ಲವಂ ಮನುಜಂತಾಂ ||
ಗಳಿಲನೆ ಪಳಿಕದೊಲಾಗಳ್ |
ತಿಳಿವಿರಜೋ ಮಂತ್ರದೀಕ್ಷಿತಂ ಪ್ರಜ್ವಳಿಪಂ || ೮ ||
ಆವನ ಬಲಪಾದದೊಳಾ |
ಪಾವನಮಯ ಸಕಲತೀರ್ಥಗಳು ನಗೆಮೊಗದೊಳ್ ||
ಸೇವಿಪ ಪಾಪಳವಾತುಗ |
ಳಾವಿಭು ಚರಣವನು ಪೂಜಿಪುದು ಜಾನಿಸುತಂ || ೯ ||
ಭಾ||ಷ|| ಸಾಸಿರದ ದಳದಂಬುಜದೊಳಾ |
ಭಾಸುರಾಮೃತ ಕಿರಣನಂ ಗುರು |
ವಾಸವನ ಸೌಗಂಧ ಪುಷ್ಪಾಂಬರನ ನಗುಮೊಗನಂ ||
ಶ್ರೀ ಸಕಲದೇವಸ್ವರೂಪಿಯ |
ನಾ ಸದಾಽಭಯ ವರಕರಾಬ್ಜನ |
ದಾಸಭಾವದಿ ಶಿರದಿಹಂಸಗನಂ ಸ್ಮರಿಪುದನಿಶಂ || ೧೦ ||

ಶ್ರೀ ಜಗದ್ಗುರು ಪಂಚಾಚಾರ್ಯೇಭ್ಯೋನಮಃ ||

## || ಕನ್ನಡ ಗುರು ಗೀತೆ ||

ಭಾ||ಷ|| ಶ್ರೀ ವಿಭವ ಪರಸುಖದ ನಿಶ್ಚಲ |
ದೇವ ಪರಮಾನಂದ ಕೇವಲ |

ಭಾವಭೇದಾತೀತ ಗಗನೋಪಮ ಸುಬೋಧನಿಧೇ ||
ಜೀವಿತಾವಳಿ ಸಾಕ್ಷಿಭೂತನೆ |
ಕೇವಲೈಕ ತ್ರಿಗುಣರಹಿತನೆ |
ಶ್ರೀ ವಟಾಶ್ರಯ ತತ್ವಮಸಿಗತ ಲಕ್ಷ್ಯನಮಿಪೆ ಗುರೋ || ೧ ||

ಕಂದ|| ಪಂಚಾಸ್ಯಲಿಂಗ ಜಾತರ್ |
ಪಂಚಾಕ್ಷರ ಮಯರು ಪಂಚಕಲಶಾಧೀಶರ್ ||
ಪಂಚಶಿವಪೀಠ ವಿಭುಗಳ್ |
ಪಂಚ ಶಿವಾಚಾರ್ಯ ಸಾರ್ವಭೌಮರ ನಮಿಪೇಂ || ೨ ||
ಗುರುಭಕ್ತಿ ಕೋಶ ಬಸವಂ |
ಗುರು ತತ್ವಜ್ಞಾನಿ ಚನ್ನಬಸವೇಶಂತಾಂ ||
ಗುರುಮೂರ್ತಿ ಪ್ರಭುದೇವಂ |
ವರಭಕ್ತಿ ಜ್ಞಾನವಿರತಿಯಂ ಚಿರವೀಗುಂ || ೩ ||
ಭೃಂಗಿ ಗುರುಗೋತ್ರಜಾತಂ |
ಜಂಗಮ ಬೋಳಾಡಿವೇಶವರತನುಜಾತಂ ||
ಸಂಗತ ಬನ್ನಿಗೊಳಮಠಂ |
ತುಂಗ ಶ್ರೀಕಂಠ ಪಂಡಿತೋತ್ತಮ ಶಿಷ್ಯಂ || ೪ ||
ಗುರುಕರುಣಾಮೃತ ವೀವೀ |
ಗುರುಗೀತೆಯ ಪುಣ್ಯಕೋಟಿ ಮಾತೆಯ ನುತಿಯಂ ||
ಗುರುಭಕ್ತನ ಮರನಾಥಂ |
ಗುರುನುಡಿಸಲ್ ಕನ್ನಡಿಸಿದ ನಾರ್ಯಸನಾಥಂ || ೫ ||
|| ಶ್ರೀ ಗಣೇಶ ಶಾರದಾ ಸದ್ಗುರು ಮಂಗಳಮೂರ್ತಿಭ್ಯೋನಮಃ ||

## || ಕನ್ನಡ ಗುರುಗೀತಾ ಪ್ರಾರಂಭವು ||

ಪರಮೆಂಬರ್ ವೇದಾಂತಿಗ |
ಳುರೆ ಸಾಂಖ್ಯರ್ ಮುಖ್ಯ ಪರಮ ಪುರುಷಮದೆಂಬರ್ ||
ನೆರೆ ವಿಶ್ವಸೃಷ್ಟಿಕಾರಣ |
ಗುರುವಿಘ್ನ ನಿವಾರಣಂಗೆ ನಾಂನತನಪ್ಪೇಂ || ೧ ||

ವಂದಿಪೆ ನಾನಾನಂದದಿ ।
ಸುಂದರ ಗಣನಾಥ ! ವಿಶ್ವವಿದ್ಯಾದಾತನೆ ! ॥
ಇಂದುಧರ ! ಕಾರ್ಯದಾದಿಯೋ ।
ಳಂದದಿ ಫಲಪೂಜೆಗೊಳ್ಳ ವಿಘ್ನವಿದೂರ ॥ ೧ ॥
ಶ್ರೀ ವಾಣಿಯೆ ಕಲ್ಯಾಣಿಯೆ ।
ದೇವಿಯೆ ಶರಣಾಗತಾಳಿ ಪೋಷಿಣಿ ಜನನೀ ॥
ಭಾವೆಯೆ ಬೊಮ್ಮನ ರಾಣಿಯೆ ।
ಓ ವೀಣಾಪಾಣಿ ಕರುಣಿಸೌ ಸನ್ಮತಿಯಂ ॥ ೨ ॥
ಅವ್ಯಕ್ತಾಚಿಂತ್ಯರೂಪಗೆ ।
ಸೇವ್ಯಗೆ ಸಗುಣಾತ್ಮ ನಿರ್ಗುಣಾತ್ಮಗೆ ಸತತಂ ॥
ಭವ್ಯಗೆ ಜಗದಾಧಾರಗೆ ।
ದಿವ್ಯಪರಬ್ರಹ್ಮಮೂರ್ತಿಗವನತನಪ್ಪೆಂ ॥ ೩ ॥
ಯಾವಜ್ಞಾನದ ಹಿರಿಮೆಯೋ ।
ಳೀ ವಿಶ್ವವು ತೋರುತಿರ್ಕು ಮಾವಗಮಖಿಲಂ ।
ಯಾವನನರಿಯಲ್ ಶ್ರೇಯಂ ।
ಸೇವಿಪುದಾಜ್ಞಾನಮೂರ್ತಿಗವನತನಪ್ಪೆಂ ॥ ೪ ॥

" ಋಷಿಗಳ್ ಬಿನ್ನಪಂ ಗೈಯ್ದರ್ "

ಗುಟ್ಟೆಂಗತಿಶಯಗುಟ್ಟಿದು ।
ದಿಟ್ಟನೆ ಗುರುಗೀತೆ ವೇದಸಾರಮೆನಿಕ್ಕುಂ ॥
ಪುಟ್ಟಿಹ ನಿನ್ನಯ ದಯೆಯಿಂ ।
ನಿಟ್ಟಿಸಿ ನೀಂ ಪೇಳಸೂತ ! ಕೇಳ್ವೆವದೆಲ್ಲಂ ॥ ೫ ॥

" ಸೂತಂ ನುಡಿದಂ "

ಸುಂದರ ಕೈಲಾಸಾಗ್ರದ ।
ಮಂದಿರದೊಳ್ ಭಕ್ತಿ ಸಾಧನಾರ್ಥಂ ಶಿವನಂ ॥
ವಂದಿಸಿ ಭಕ್ತಿಯೊಳಗಜೆಯು ।
ಮುಂದೆ ಕರಂ ಮುಗಿದು ನಿಂದು ತಾಂ ಪ್ರಶ್ನಿಸಿದಳ್ ॥ ೬ ॥

" ಪಾರ್ವತಿಯು ಬಿನ್ನವಿಸಿದಳ್ "

ಶ್ರೀ ದೇವದೇವ ! ಪಶುಪತೆ !!
ಮಾದೇವನೆ! ಪರಕೆಪರನೆ ! ತ್ರಿಜಗದ್ಗುರುವೆ ||
ನಾದಾತ್ಮಕನೆ ! ಸದಾಶಿವ !!
ಮೋದದಿ ಗುರುದೀಕ್ಷೆಯಿತ್ತು ರಕ್ಷಿಸು ನಮಿಪೇಂ || ೭ ||
ಬಲ್ಲಿದನೆಲ್ಲ ಸುಧರ್ಮಾರ್ಣವ |
ಸೊಲ್ಲಿಸು ದಯೆಯಿಂದಲೆನಗೆ ಶಂಭುವೆ ಭಗವನ್ |
ಬಲ್ಲಿದ ಮೆಲ್ಲಾವ್ರತಕಂ |
ನಲ್ಲನೆ! ಗುರುಮಹಿಮೆಯುಂ ಶಿರೋವ್ರತಮುಂ ನೀಂ || ೮ ||
ಎಂತಪ್ಪ ನಡೆಯೊ ಠೊಡೆಯಾ !!
ಸಂತತವಿೂದೇಹಿಯಪ್ಪ ನಾ ಬ್ರಹ್ಮಮಯಂ ||
ಅಂತೆನಗೆ ಕೃಪೆಯ ಮಾಡೈ |
ಸಂತಸದೊಳ್ ನಿನ್ನ ಪಾದಯುಗಳವ ನಮಿಪೇಂ || ೯ ||

" ಈಶ್ವರಂ ನುಡಿದಂ "

ದೇವನೊಳಾವಗೆ ಭಕುತಿಯು |
ಏವಿಧದಿಂದಿರ್ಕುಮಂತೆ ಗುರುವಿನೊಳಕ್ಕುಂ ||
ಭಾವಿಸೆ ಸರ್ವಾರ್ಥಗಳುಂ |
ತಾವೆ ಮಹಾತ್ಮನಿಗವಂಗೆ ಸಲೆದೊರೆಕೊಳ್ಗುಂ || ೧೦ ||
ಎನ್ನಯರೂಪಂ ನೀನೇ |
ನಿನ್ನಯ ಸದ್ಭಕ್ತಿಗಾಗಿ ನಾಂ ಪೇಳುತಿಹೇಂ |
ಮುನ್ನಿದನಾರ್ ಕೇಳ್ದಿಲ್ ಸಂ |
ಪನ್ನೆಯೆ ! ಲೋಕೋಪಕಾರ ವಿೂ ಪ್ರಶ್ನೆಯುದಲ್|| ೧೧ ||
ಯಾವಂ ಗುರುವವನೆ ಶಿವಂ |
ದೇವಂ ಶಿವನವನೆ ಗುರುವುದಲ್ ಶ್ರುತಿ ಮತದಿಂ ||
ಆವಂ ಸಂಶಯಮಾಳ್ಪಂ |

ಸಾವಂ ಗುರುತಲ್ಪಗಾಮಿ ನರಕದಿ ಬೀಳ್ವಂ ॥ ೧೨ ॥
ಇದು ಮೂಲೋಕದಿ ದುರ್ಲಭ ।
ಮದುವಂ ನಿನಗಾಗಿಪೇಳ್ವೆ ಕೇಳ್ವರವದನೇ ॥
ಅದು ಗುರುವೇ ಪರಬೊಮ್ಮಂ ।
ಇದನುಳಿದಿನ್ನಾವುದಿಲ್ಲ ಸತ್ಯಂ ಸತ್ಯಂ ॥ ೧೩ ॥

ಗುರುಮಹಿಮೆ :–

ಪಳವಾತುಂ ಶಾಸ್ತ್ರಂಗಳ್ ।
ಪೊಳೆವಿತಿಹಾಸಾದಿಗಳ್ ಪುರಾಣ ಪ್ರಚಯಂ ॥
ಗಳು ಮಂತ್ರಯಂತ್ರ ವಿದ್ಯೆಯು ।
ತಿಳಿಯಲ್ ಸ್ಮೃತಿ ನಿಕರಮುಖಿಳ ಮುಚ್ಚಾಟನಮುಂ ॥ ೧೪ ॥
ಭಾಸುರ ಶೈವಂ ಶಾಕ್ತಂ ।
ಭೂಸುರ ನಿಗಮಾಗಮಾದಿಗಳ್ ವಿವಿಧಂಗಳ್ ॥
ಆಸುರಮತ ವಿತರಂಗಳ್ ।
ಆ ಸಕಲಭ್ರಾಂತಚಿತ್ತಜೀವಾವಳಿಗಂ ॥ ೧೫ ॥
ಮೌನಧ್ಯಾನಂ ವ್ರತಜಪ ।
ದಾನ ತಪೋಯಜ್ಞ ತೀರ್ಥಯಮ ನಿಯಮಂಗಳ್ ॥
ತಾನೆ ಗುರುತತ್ವ ಮಿದನುಳಿ ।
ಜ್ಞಾನರರೇ ಮೂಢರನ್ಯಮತ ರತರೆನಿಪರ್ ॥ ೧೬ ॥
ಪೆರತಿಲ್ಲ ಮಾತ್ಮನೇ ಗುರು ।
ನಿರುತಂತಾ ನಿರುತಮಿಲ್ಲಿ ಸಂಶಯಮಿಲ್ಲಂ ॥
ಅರಿತೀ ಗುರುವಂ ಪೊಂದಲ್ ।
ನೆರೆತೀವ್ರದಿ ಯತ್ನ ಮಾಡಲಕ್ಕುಂ ಬುಧರಿಂ ॥ ೧೭ ॥
ಗೂಢಂ ತಾನಾತ್ಮ ವಿದ್ಯೆಯು ।
ಗಾಢಂ ದೇಹಮಿದು ಮೂಡಿಹುದು ಮೂಢತೆಯಿಂ ॥
ಬಾಢಂ ಸ್ವಾತ್ಮಪ್ರಭೆಯಿಂ ।
ಪ್ರೌಢಂ ತನ್ನಿರವ ನರಿಯಲದೆ ಗುರುಶಬ್ದಂ ॥ ೧೮ ॥
ಆವನ ಪಾದದ್ವಂದ್ವಂ ।

ಸೇವಕರಾದ್ವಂದ್ವತಾಪಗಳ ಕಳೆಯುತ್ತಂ ॥
ಓವುದು ಭವಸಾಗರದಿಂ ।
ದೇವಶ್ರೀ ಗುರುವಿಗಾನು ಮಾನತನಪ್ಪೇಂ ॥ ೧೯ ॥
ನರನವಗಂ ಬ್ರಹ್ಮತ್ವವು ।
ದೊರೆಕೊಳ್ಳುವದದಂ ಕೃಪಾರ್ಥ ಮೊರೆವೇಂ ನಿನಗಾಂ ॥
ಗುರುಪಾದ ಸೇವೆಯಿಂದಂ ।
ದುರಿತೌಘವು ದೂರಮಾಗೆ ಪರಿಶುದ್ಧಾತ್ಮಂ ॥ ೨೦ ॥

ಗುರುಪಾದೋದಕ ಮಹಿಮೆ :–

ಧರೆಯೋಳ್ ತೀರ್ಥ ಸ್ನಾನದ ।
ವರಪುಣ್ಯಫಲಂ ನರಂಗೆ ದೊರೆಕೊಳ್ಳುದುದಲ್ ॥
ಗುರುಪಾದಾಂಬುಜ ಯುಗವಂ ।
ಸ್ಮರಿಸುತ ಪಾದೋದಕವನು ತಳಿವುದು ತಲೆಯೋಳ್ ॥ ೨೧ ॥
ಒಣಗಿವುದು ಪಾಪಪಂಕವ ।
ನಣಿಯರದಿಂ ಜ್ಞಾನದೀಪವಂ ಬೆಳಗಿವುದೈ ॥
ಮಣಿದು ಗುರುಪಾದತೀರ್ಥದಿ ।
ತಣಿಯೆ ಬುಧಂ ದಾಟುವಂ ಭವಾಂಭೋನಿಧಿಯಂ ॥ ೨೨ ॥
ಮರವೆಯ ಬೇರಂ ತರಿವುದು ।
ಹರಿವುದು ಜನ್ಮಾಂತರದ ಕುಕರ್ಮಾವಳಿಯಂ ॥
ಅರಿವಂ ವಿರತಿಯ ಪಡೆಯಲ್ ।
ಗುರುಪಾದೋದಕವ ಕುಡಿಯಲಕ್ಕುಂ ಮುದದೋಳ್ ॥ ೨೩ ॥
ಗುರುಪಾದ ಜಲವ ಕುಡಿವುದು ।
ಗುರುವರನುಚ್ಛಿಷ್ಟಮಿದನೆ ಭುಂಜಿಪುದು ದಿನಂ ॥
ಗುರುಮೂರ್ತಿಯ ಹೃನ್ಮಧ್ಯದಿ ।
ಸ್ಮರಿಪುದು ಗುರುಮಂತ್ರವಿದನೆ ಜಪಿಸುವದನಿಶಂ ॥ ೨೪ ॥
ತನ್ನ ಗುರುದೇವಚಿಂತನ ।
ಮಿನ್ನು ಸದಾನಂತ ಶಿವನಚಿಂತನ ಮೆನಿಕುಂ ॥
ತನ್ನಯ ಗುರುನಾಮ ಕೀರ್ತನ ।

ಮುನ್ನತ ಚಿದನಂತ ಶಿವನ ಕೀರ್ತನ ಮೆನಿಕುಂ ॥ ೨೫ ॥
ಯಾವ ಶ್ರೀ ಗುರುಪಾದದ ।
ಪಾವನಧೂಳಿಯು ಭವಾಂಬುನಿಧಿಯಂ ದಾಂಟಲ್ ॥
ಭಾವಿಸೆ ಸೇತುವೆ ಯೆನಿಪುದು ।
ಸೇವಿಪೆನಾಂ ಪೂಜ್ಯದೇಶಿ ಕೋತ್ತಮನಡಿಯುಂ ॥ ೨೬ ॥
ಯಾವನನುಗ್ರಹ ಬಲದಿಂ ।
ತೀವಿರ್ದಜ್ಞಾನಪಟಲಪರಿವುದು ಜವದಿಂ ।
ದೇವಶ್ರೀದೇಶಿಕೇಂದ್ರಗೆ ।
ಭಾವದೆ ಪೊಡಮಡುವೆ ನೆಲ್ಲಭೀಷ್ಟವ ಪಡೆಯಲ್ ॥ ೨೭ ॥

ಗುರ್ವಾಶ್ರಮ ಮಹಿಮೆ :-

ಗುರವಿರ್ದೆಡೆಯೇ ಕಾಶಿಯು ।
ಗುರುಚರಣೋದಕವೆ ಪುಣ್ಯಭಾಗೀರಥಿತಾಂ ॥
ಗುರುಸಾಕ್ಷಾದ್ವಿಶ್ವೇಶ್ವರ ।
ಗುರುವರನೇ ಪರಮತಾರಕಬ್ರಹ್ಮವುದಲ್ ॥ ೨೮ ॥
ಗುರುವಿನಡಿ ಗುರುತಿಸಿರ್ಪೆಡೆ ।
ಹರಿಸಂಭವ ಪುಣ್ಯವಟಗಯಾ ಸ॒ಕ್ಷೇತ್ರಂ ॥
ವರತೀರ್ಥರಾಟ್ಪ್ರಯಾಗಂ ।
ಗುರುಮೂರ್ತಿಯಿದೆಂದುನಂಬು ಸಂದೆಯವಿಲ್ಲಂ ॥ ೨೯ ॥

ಗುರುಸನ್ನಿಧಿಯಲ್ಲಿಯ ನಡತೆ :-

ಗುರುಮೂರ್ತಿಯನೇ ನೆನೆವುದು ।
ಗುರುವಿನ ನಾಮವನು ಬಿಡದೆ ಜಪಿಸುತ್ತಿರ್ಕುಂ ॥
ಗುರುಶಾಸನದಿಂ ನಡೆವುದು ।
ಗುರುವಿಗೆ ತಾನೆರಡು ಬಗೆಯಲಾಗದದೆಂದುಂ ॥ ೩೦ ॥
ಗುರುಮುಖದೊಳಿರ್ಪ ಬೊಮ್ಮಂ ।
ದೊರೆಯುವುದಾ ಗುರುವರೇಣ್ಯ ನಾಶೀರ್ಬಲದಿಂ ॥
ಗುರುಮೂರ್ತಿಯ ಮನದೆ ನೆನೆವುದು ।
ಪರಪುರುಷನ ಬಿಡದೆ ನೆನೆವ ಜಾರಿಣಿ ತೆರದೊಳ್ ॥ ೩೧ ॥

ತನ್ನತು ಮಾನ್ಯಾಶ್ರಮವಂ ।
ತನ್ನಯ ಜಾತಿಯತನತ್ತು ಬಲ್ಲಿದ ಜಸವಂ ॥
ತನ್ನ ಶರೀರ ಸುಪುಷ್ಟಿಯ ।
ದಿನ್ನನ್ಯವದೆಲ್ಲ ಮರೆತು ಗುರುವಂ ಭಜಿಕುಂ ॥ ೩೨ ॥
ಪರಮುಕ್ತಿ ಸುಖವ ಬಯಸುವ ।
ನರಶಾಂ ಚಿಂತಿಸದೆ ಪೆರತು ದುರ್ವಿಷಯಗಳಂ ॥
ನೆರೆಯಲ್ಲ ಯತ್ನದಿಂದಂ ।
ಗುರುವರ ನಾರಾಧನೆಯನು ಮಾಳ್ಪಂ ಸುಲಭಂ ॥ ೩೩ ॥
ಗುರುಮುಖದೊಳಿಹುದು ವಿದ್ಯೆಯು ।
ಗುರುದೇವನ ಭಕುತಿಯಿಂದೆ ದೊರೆಕೊಳ್ವುದುದಲ್ ॥
ಸುರನರಪನ್ನಗರೆಲ್ಲರ್ ।
ನೆರೆಮಾತಾಳಿಗಳು ಬುಧರು ಗುರುವಿನ ದಯದಿಂ ॥ ೩೪ ॥
ಕತ್ತಲೆಗುಕಾರ ಮೆನಿಕುಮು ।
ದೆತ್ತಲು ಕತ್ತಲೆಯಕಳೆವ ಬೆಳಕೆ ರುಕಾರಂ ॥
ಮತ್ತಜ್ಞಾನದ ತಮುವಂ ।
ಸುತ್ತಲು ಕಬಳಿಸುವಬೊಮ್ಮ ಮದುವೇ ಗುರುದಲ್ ॥ ೩೫ ॥
ಗುಣದೂರವ:ದುಗುಕಾರಂ ।
ಎಣಿಸಲ್ ರೂಪಕ್ಕತೀತ ಮದುವೆರುಕಾರಂ ॥
ಗುಣರೂಪಾತೀತನತಾ ।
ನಣಿಯರವಿಂವುದರಿನವನೆ ಗುರುವೆಂದೆನಿಪಂ ॥ ೩೬ ॥
ಮೊದಲಗುಕಾರಂ ರೋಚಕ ।
ಮದುಮಾಯಾಗುಣ ಸಮಾಶ್ರಿತಂ ಚಿರಮೆನಿಕುಂ ॥
ತುದಿಯರುಕಾರಂ ಬ್ರಹ್ಮಂ ।
ಮದಮಾಯಾಭ್ರಾಂತಿ ಮೋಚಕಂ ನಿಜಮೇಕಂ ॥ ೩೭ ॥

ಗುರುಸ್ಥಲದ ಶ್ರೇಷ್ಠತೆ :—

ಓಹೋ ! ಗುರುಪದವೇ ಮೇಲ್ ।
ಮಾಹೇಶ್ವರಿ ಸುರರಿಗೆಲ್ಲ ದುರ್ಲಭಮೆನಿಕುಂ ॥

ಹಾ ಹಾ ಹೂ ಹೂ ಮುಖ್ಯರ್ ।
ಮಹಾತ್ಮ್ಯವ ಪೊಗಳಿ ಪೂಜಿಪರು ಗಂಧರ್ವರ್ ॥ ೩೮ ॥
ಸುರರಾಸಂದಣಿಗೆಲ್ಲಂ ।
ಪರತತ್ವಂ ಗುರುವಿಗಿಂತ ಮೇಣ್ ಮೇಲಿಲ್ಲಂ ॥
ಗುರುದೇವನ ಪೂಜಿಸುತಂ ।
ನೆರೆಸರ್ವಸ್ವವ ಸಮರ್ಪಿಸುವುದ ನವರತಂ ॥ ೩೯ ॥

ಗುರುವಿಗೆ ಸರ್ವಸಮರ್ಪಣೆ :–

ವಸನಾಸನವಂ ಶಯನವ ।
ವಸುವಾಹನ ಭೂಷಣಾದಿಗಳ ಗುರುದಾಸಂ ॥
ಒಸೆದಾಸಾಧಕ ನೀವುದು ।
ನಿಸದಂ ಗುರುವಂಸದಾ ಸಮಾರಾಧಿಸುಗುಂ ॥ ೪೦ ॥
ವೈಮನವಮಾತುಗಳಿಂದಂ ।
ನೇಮದೊಳಾರಾಧಿಸುತ್ತ ಗುರುವಂ ನಿರುತಂ ॥
ಪ್ರೇಮಮಯದೀರ್ಘದಂಡದಿ ।
ತಾಮಣೆವುದು ನಾಣನುಳಿದು ಗುರುಸನ್ನಿಧಿಯೊಳ್ ॥ ೪೧ ॥

ಸಂಸಾರದ ಹೇಯತೆ :–

ದೇಹವ ಮಿಂದ್ರಿಯ ಗಣವಂ ।
ಆ ಹಣವಂ ಹರಣವಂ ಸ್ವಬಾಂಧವ ಜನವಂ ॥
ನೇಹದ ಗೇಹಾದಿಕವಂ ।
ಮೋಹವ ತೊರೆದಾತ್ಮ ಸದ್ಗುರುವಿಗೊಪ್ಪಿಸುಗುಂ ॥ ೪೨ ॥
ಕ್ರಿಮಿಕೀಟ ಜಂತುದೂಷಿತ ।
ಮಮಮಾ ! ದುರ್ಗಂಧ ಮೂತ್ರಮಲರೂಷಿತಮುಂ ।
ಬೆಮರು ಕಫ ರಕ್ತ ಮಾಂಸಾ ।
ಕ್ರಮಿತಂ ತೊವಲುಡೆಯ ಹೇಯಗೇಹಂ ದೇಹಂ ॥ ೪೩ ॥

ನಾನಾಸ್ತುತಿಯಿಂ ಗುರು ನಮಸ್ಕಾರಂ :–

ಭವತರುವಂ ಪತ್ತಿದವರ್ ।
ತವಕದೆತಾವ್ ಬೀಳ್ವರ ಕಟನರ ಕಾರ್ಣವದೊಳ್ ॥

ತನೆಯುದ್ಧರಿಸುತೆ ಪೊರೆವಂ ।
ಬುವಿಯೊಳಗಾ ಶ್ರೀಗುರೋತ್ತಮಗೆನತ ನಪ್ಪೇಂ ॥ ೪೪ ॥
ಗುರುವೇ ಅಜಗುರು ಹರಿನಿಜ ।
ಗುರುವೇ ಮನುಜರ್ಗೆ ಕಣ್ಗೆಕಾಂಬ ಮಹೇಶಂ ॥
ಗುರುವೇ ಸಾಕ್ಷಾದ್ಬ್ರಹ್ಮಂ ।
ಪರಮ ಶ್ರೀಗುರುವರೇಣ್ಯ ಗವನತನಪ್ಪೇಂ ॥ ೪೫ ॥
ಮೂಜಗದ ಹೇತುವಿಗೆ ಸಲೆ ।
ಸೋಜಿಗದ ಭವಾಂಬುನಿಧಿಯ ಸೇತುವಿಗೆ ನಿಜಂ ।
ಓಜಗೆ ಬಿಜ್ಜೆಗಳೆಲ್ಲಕೆ ।
ಸಾಜಗೆ ಕಾರುಣ್ಯಗುರುವರೇಣ್ಯಗೆ ನಮಿಪೇಂ ॥ ೪೬ ॥
ಚಟ್ಟರೆದೆ ಗತ್ತಲವ ಕಳೆ ।
ದಟ್ಟಲ್ ದಲ್ ಭಾನುಗಮರಧೇನು ಸಮಂಗಂ ॥
ತಟ್ಟನೆ ಪಡೆಯಲಭೀಷ್ಟವ ।
ದಿಟ್ಟಸೆ ಸುರತರುವಿ ಗೆರಗುವೇಂ ಗುರುವರಗಾಂ ॥ ೪೭ ॥
ಅಜ್ಞಾನತಮದಿ ಕುರುಡಗೆ ।
ಸುಜ್ಞಾನಾಂಜನಶಲಾಕೆಯಿಂದಂ ಚಂದಂ ॥
ಪ್ರಜ್ಞಾದೃಷ್ಟಿಯ ತೆರೆಯಿಪ ।
ಪ್ರಾಜ್ಞ ಶ್ರೀಗುರುವಿಗಾನು ಮಾನತನಪ್ಪೇಂ ॥ ೪೮ ॥
ಮಂಡಲರೂಪ ಮಖಂಡಂ ।
ಮಂಡಿಸಿ ಚರಮಚರಮೇತರಿಂಗೋಚರಿಕುಂ ॥
ಚಂಡಿಯೆ ತತ್ಪದಮಾರಿಂ ।
ಕಂಡಿಹುದಾಗುರುವರೇಣ್ಯಗವನತಪ್ಪೇಂ ॥ ೪೯ ॥
ಸ್ಥಾವರಮಿದು ಜಂಗಮಮಿದು ।
ಭಾವಿಪೊಡೇನಾನುಮುಂಟು ಸಚರಾಚರಮುಂ ॥
ದೇವಿತ್ವಂಪದ ಮರುಹಿದ ।
ಭಾವುಕಮಯ ಗುರುವರೇಣ್ಯಗವನತನಪ್ಪೇಂ ॥ ೫೦ ॥

ಸಚ್ಚಿನ್ಮಯನುಂ ಪೂರ್ಣಂ ।
ಸಚ್ಚಿತ್ಸಾನಂದವಿಗ್ರಹಂ ಸ್ವಚ್ಛತರಂ ॥
ಮೆಚ್ಚಿನೊಳಸಿಪದ ಮರುಹದ ।
ನುಚ್ಚತರಂಗುರುವರೇಣ್ಯಗವನತನಪ್ಪೇಂ ॥ ೫೧ ॥
ಘನವೇದ ಶಿರೋಮಣಿ ।
ವಿನುತಾರತಿಯಿಂದೆ ಬೆಳಗುವಂಘ್ರಿಪಯೋಜಂ ॥
ಇನನಾವೇದಾಂತಾಬ್ಜಕೆ ।
ಯನಘ ಶ್ರೀ ಗುರುವರೇಣ್ಯಗವನತನಪ್ಪೇಂ ॥ ೫೨ ॥
ಗುರುವ್ಪೋರ್ವನೆ ಜಗವೆಲ್ಲಂ ।
ಗುರುವೇ ತಾಂ ಬ್ರಹ್ಮವಿಷ್ಣುಶಿವಮುಯನೆನಿಕುಂ ॥
ಗುರುವಿಂ ಪರತರಮಿಲ್ಲಂ ।
ವರದ ಶ್ರೀ ಗುರುವಿಗಾನು ಮಾನತನಪ್ಪೇಂ ॥ ೫೩ ॥
ಚೈತನ್ಯಂ ಶಾಶ್ವತನುಮ ।
ಶೀತಕಲಾನಾದಬಿಂದು ಗಗನಾತೀತಂ ॥
ಪೂತನಿರಂಜನ ಶಾಂತಂ ।
ತಾತ ಶ್ರೀ ಗುರುವರೇಣ್ಯಗವನತನಪ್ಪೇಂ ॥ ೫೪ ॥
ನಿಮಿಷದ ಕಾಲಂಶದಿ ಸಂ ।
ಯಮಿಗುರುಸದಯಾವಲೋಕನದೊಳುದಯಿಪುದೈ ॥
ವಿಮಲಸ್ವಾತ್ಮಜ್ಞಾನಂ ।
ನಮಿಪೇಂ ಶ್ರೀ ಗುರುವರೇಣ್ಯ ಸದ್ಗುಣ ನಿಧಿಗಂ ॥ ೫೫ ॥
ಸ್ಥಾವರಮಚರಂ ಶಾಂತಂ ।
ಭಾವಿಸಲೀಚರಿಪ ಜಂಗಮಂಚರಮೆನಿಕುಂ ॥
ಶೀವಿಹುದಾರಿಂದೀಜಗ ।
ದೇವ ಶ್ರೀ ಗುರುವರೇಣ್ಯಗವನತನಪ್ಪೇಂ ॥ ೫೬ ॥
ಹಿಂದಿನ ಜನ್ಮಾಂತರದೋಳ್ ।
ಪೊಂದಿಹ ದುಷ್ಕರ್ಮದುರಿತಗಳ ಸುಡುತಿರ್ಪಂ ॥
ಸಂದಸುಬೋಧದ ಬೆಳಗಿಂ ।

ತಂದೆಗೆ ಗುರುದೇವಗಾನು ಮಾನತನಪ್ಪೇಂ ॥ ೫೭ ॥
ಅರಿವಿನ ಬಲದಿಂ ಬೆಳದಿಹ ।
ಪರತತ್ವಸುಮಾಳಿ ಕಂಠಮಾಲಾಭರಣ ॥
ವರಭುಕ್ತಿಮುಕ್ತಿದಾಯಕ ।
ಪರಮ ಶ್ರೀ ಗುರುವರೇಣ್ಯ ಗವನತನಪ್ಪೇಂ ॥ ೫೮ ॥
ಗುರುವಿಂ ತತ್ವಂ ಪರಮಿಲ್ ।
ಗುರುವಿಂದಂ ಶ್ರೇಷ್ಠಮಾದತಪಮಿನ್ನಿಲ್ಲಂ ॥
ಗುರು ಬೋಧಕೆ ಪರಮಿಲ್ಲಂ ।
ಪರಮ ಶ್ರೀ ಗುರುವರೇಣ್ಯಗವನತನಪ್ಪೇಂ ॥ ೫೯ ॥
ಎನ್ನೊಡೆಯಂ ಜಗದೊಡೆಯಂ ।
ಎನ್ನಯ ಗುರುದೇವನಾ ಜಗದ್ಗುರುದೇವಂ ।
ಇನ್ನಖಿಳಾತ್ಮ ನಿಜಾತ್ಮಂ ।
ಸನ್ನುತ ಸದ್ಗುರುವರೇಣ್ಯ ಗವನತನಪ್ಪೇಂ ॥ ೬೦ ॥
ನಿರ್ಗುಣನುಂ ನಿರ್ಮಮನು ನಿ ।
ಸರ್ಗದಿ ಸಚರಾಚರಾದಿಭುವನವ್ಯಾಪ್ತಂ ॥
ನಿರ್ಗತಿಸಿ ತೋರ್ಗುವಾರಿಂ ? ।
ಭರ್ಗ ಶ್ರೀ ಶಾಂತಗುರುವರೇಣ್ಯಗೆ ನಮಿಪೇಂ ॥ ೬೧ ॥
ನೀನೆನಗೆ ತಂದೆತಾಯಿಯು ।
ನೀನೆನಗಂಬಂಧುವಾದಿದೇವಸರೂಪಂ ॥
ನೀನೆ ಭವಮೋಹಭಂಗಂ ।
ಜ್ಞಾನಿ ಶ್ರೀ ಗುರುವೆ ನಿನಗಮಾನತನಪ್ಪೇಂ ॥ ೬೨ ॥
ಆವನಿರೆ ಜಗಮಿದಿರ್ಕುಂ ।
ಆವನಬೆಳಗಿಂದ ಬೆಳಗುಗುಂ ತಾಮೆಲ್ಲರ್ ॥
ಆವನ ಸುಖದಿಂ ಸುಖಿಪರ್ ।
ದೇವ ಶ್ರೀಗುರುವಿಗಾನು ಮಾನತನಪ್ಪೇಂ ॥ ೬೩ ॥

( ಸೃಷ್ಟ್ಯಾದಿ ಕರ್ತೃತ್ವ )

ಯಾವನೊಳೀಜಗಮಿರ್ಪುದು ।
ಯಾವನ ಬಯಕೆಯೊಳೆಯುದಿಸಿ ಬೆಳಗುವುದಿದು ತಾಂ ॥

ಆವನ ನೊಲವಿಂದೆ ನಲುಬಾಳ್ ।
ದೇವಶ್ರೀ ಗುರುವಿಗಾನು ಮಾನತನಪ್ಪೆಂ ॥ ೬೪ ॥

( ಚೈತನ್ಯದಾಯಕಗುರು )

ಜಡಮೀ ಜಗಮುಂ ಚಿತ್ರಂ ।
ಜಡ ಜಾಗ್ರತ್ಸ್ವಪ್ನಸುಪ್ತಿ ಚೇತನವೆನಿಕುಂ ॥
ಗಡ ಚೈತನ್ಯನ ಕತದಿಂ ।
ಮೃಡಮೂರ್ತಿ ಗುರೂತ್ತಮಂಗೆ ನಾಂ ನತನಪ್ಪೆಂ ॥ ೬೫ ॥

( ಕಾರ್ಯಕಾರಣೈಕ್ಯಗುರು )

ಜಗಮಿದುಮಾತನ ದೃಶ್ಯವು ।
ಜಗಗುರುವೆರಡಕ್ಕೆ ಭಿನ್ನಭೇದಮದಿಲ್ಲಂ ॥
ಮಿಗೆಸದ್ರೂಪ ಸದೇಕಂ ।
ಸೊಗದಿಂ ಶ್ರೀಗುರುವಿಗಾನುಮಾನತನಪ್ಪೆಂ ॥ ೬.೬ ॥
ಆವನಮತಮರಿದಾರಿಗು ।
ಮಾವನು ಮರಿಯದಿಹ ಬೇರೆಮತಮಿನ್ನಿಲ್ಲಂ ॥
ಆವನ್ಯಭಾವಮಿಲ್ಲದ । ·
ಭಾವನೆಯಾಗುರುವಿಗಾನು ಮಾನತನಪ್ಪೆಂ ॥ ೬೭ ॥
ನಾನಾರೂಪಂ ವಿಶ್ವಂ ।
ಏನಾನುಂ ಭೇದಮಿಲ್ಲದಾ ಕಾರಣದಿಂ ॥
ತಾನೇಕಾರಣಕಾರ್ಯಂ ।
ಜ್ಞಾನಿ ಶ್ರೀ ಗುರುವರೇಣ್ಯಗಾನತನಪ್ಪೆಂ ॥ ೬೮ ॥
ಕಾರಣರೂಪಿನ ಗುರುವಿಂ ।
ತೋರುವುದೀ ಕಾರ್ಯರೂಪದಿಂದಂ ವಿಶ್ವಂ ॥
ಕಾರಣಕಾರ್ಯಸರೂಪಂ ।
ಚಾರು ಶ್ರೀ ಗುರವಿಗಾನು ಮಾನತನಪ್ಪೆಂ ॥ ೬೯ ॥
ಗುರುವೇ ಆದಿಯನಾದಿಯು ।

ಗುರುವೇ ತಾಂ ಪರಮದ್ವೈವತಂ ನಿಜ ಸತತಂ ।
ಗುರುಮಂತ್ರಕೆ ಸಮನಿಲ್ಲಂ ।
ಪರಮ ಶ್ರೀ ಗುರುವಿಗಾನುಮಾನತನಪ್ಪೇಂ ॥ ೭೦ ॥

( ಆಪದ್ಬಂಧಗುರು )

ಓರ್ವನೆ ಗುರುವೇ ಬಂಧುವು ।
ದುರ್ವಿಷಮ ಸ್ಥಿತಿಯೊಳೆಲ್ಲ ಜನಕಂ ಮನಕಂ ॥
ಸರ್ವಸುಧರ್ಮಾತ್ಮಂ ದಲ್ ।
ಶರ್ವ ಶ್ರೀ ಗುರುವಿಗಾನು ಮಾನತನಪ್ಪೇಂ ॥ ೭೧ ॥

( ಜಗದಭೇದಗುರು )

ಗುರುಮಧ್ಯದಿ ಜಗಮಿರ್ಪುದು ।
ಗುರುವೇ ತಾಂ ಜಗದ ಮಧ್ಯದೊಳು ನೆಲಸಿರ್ಪಂ ॥
ಗುರುವೇ ಜಗ ಜಗವೇ ಗುರು ।
ನಿರುತಂ ಶ್ರೀಗುರುವಿಗಾನು ಮಾನತನಪ್ಪೇಂ ॥ ೭೨ ॥

( ಸನ್ಮಾರ್ಗದ ಗುರು )

ಶುಭವಾರಣ್ಯದಿ ಪೊಗುತಂ ।
ಸಭಯಮಹಾಭ್ರಾಂತಚಿತ್ತದಿಙ್ಮೂಢಗೆ ತಾಂ ॥
ಶುಭಸನ್ಮಾರ್ಗವ ತೋರ್ದಾ ।
ಪ್ರಭುವರಗುರುದೇವಗಾನು ಮಾನತನಪ್ಪೇಂ ॥ ೭೩ ॥

( ತಾಪಪಾಪಹಂಗುರು )

ತಾಪತ್ರಯಾಗ್ನಿಯಿಂ ಸಂ ।
ತಾಪವ ಪಡುತಿಹರ ತಾಪಪಾಪವ ಬೇಗಂ ॥
ತಾ ಪರಿಹರಿಸುವಗಂಗಾ ।

ರೂಪಸುಪಾವನಗೆ ಗುರುವಿಗಾನತ ನಪ್ಪೆಂ ॥ ೭೪ ॥
ಆದಿಯನಾದಿಯು ಗುರುತಾಂ ।
ಹಾದಿಯು ಮುಕುತಿಂಗೆ ಪರಮದೈವತನಾತಂ ॥
ವೇದದಿ ಗುರುಸಮಮಿನ್ನಿಲ್ ।
ನಾದಸರೂಪಂಗೆ ಗುರುವಿಗಾನತನಪ್ಪೆಂ ॥ ೭೫ ॥

( ವಿಷಯವಿಷಕೆ ವೈದ್ಯಗುರು )

ಅಜ್ಞಾನ ಸರ್ಪದಷ್ಟರ ।
ಸುಜ್ಞಾನದೆ ಸಲೆಚಿಕಿತ್ಸೆಗೈವ ಸುವೈದ್ಯಂ ॥
ಪ್ರಜ್ಞಾಸ್ವರೂಪ ಭಗವಾನ್ ।
ಯಜ್ಞೇಶ್ವರ ಗುರುವಿಗಾನು ಮಾನತನಪ್ಪೆಂ ॥ ೭೬ ॥

( ಮುಕ್ತಿ ಮೂಲಗುರು )

ಗುರುವೇ ಧ್ಯಾನದ ಮೂಲಂ ।
ಗುರುದೇವನ ಪಾದಮದುವೆ ಪೂಜಾಮೂಲಂ ॥
ಗುರುವಚನ ಮಂತ್ರಮೂಲಂ ।
ಗುರುದಯೆಯೇ ಮುಕ್ತಿಮೂಲ ಮವಗಾಂ ನಮಿಪೆಂ ॥ ೭೭ ॥

( ನಿತ್ಯಸುಖದಾಯಕಗುರು )

ಯಾವನ ಕಟಾಕ್ಷಮೇರುವ ।
ನಾವಗಮಾಶ್ರೈಸಿ ನಿತ್ಯಸುಖದಿಂದಿರ್ಪೆಂ ॥
ಭಾವಿಸೆಕೃತಾರ್ಥನಪ್ಪೆಂ ।
ಸೇವಿಪೆ ನಾಶ್ರೈಪೆ ನಮಿಪೆ ಗುರುನಾಥನನಾಂ ॥ ೭೮ ॥

( ಗುರುಚರಣಸ್ತುತಿ )

ಹರಣಂಭವರೋಗಾಳಿಗೆ ।
ಕರಣಂ ಸರ್ವಾರ್ಥಸಂಪಜಂಗಳ್ಗನಿಶಂ ॥

ಭರಣಂ ಭಕ್ತಾಳಿಗೆ ಗುರು ।
ಚರಣಂ ಶರಣಂ ಜಗಕ್ಕೆ ಗುರುವಂ ನಮಿಪೇಂ ॥ ೭೯ ॥

( ಮೃಡಮೂರ್ತಿಗುರು )

ಎಡೆವಿಡದಾ ಸದ್ರೂಪಿಗೆ ।
ಒಡೆಯ ಚಿದಾನಂದಗಾತ್ರಮೂರ್ತಿಗದೆಂತುಂ ॥
ಪೊಡಮಡುವೇಂ ಕಡೆಗಣಿಪೇಂ ।
ಮೃಡ ತಾನೇನಿಜದಿ ಗುರುವೆನುತ್ತಂ ನಮಿಪೇಂ ॥ ೮೦ ॥

( ದಯಾನಿಧಿಗುರು )

ನಿತ್ಯನಿಗೆ ನಿರ್ವಿಕಲ್ಪಗೆ ।
ನುತ್ಯಗೆ ನಿರವದ್ಯಗಮಳ ನಿಜನಿಷ್ಕಳಗಂ ॥
ಸತ್ಯಗೆ ನಿಸ್ಪೃಹ ಯೋಗಿಗೆ ।
ಭೃತ್ಯ ದಯಾನಿಧಿಗೆ ಶಿವಗೆ ಗುರುವಿಗೆ ನಮಿಪೇಂ ॥ ೮೧ ॥

( ಚಿನ್ನಿಧಿಗುರು )

ಶಿಷ್ಯಹೃದಂಬುಜ ಸೂರ್ಯಗೆ ।
ಋಷ್ಯನಘಜ್ಞಾನ ಬೋಧಕಗೆ ಚಿನ್ನಿಧಿಗಂ ॥
ಹೃಷ್ಯದ್ವೇದಾಂತಜ್ಞಗೆ ।
ತೃಷ್ಯತ್ತೃಷಿತಂಗೆ ಶಿವಗೆ ಗುರುವಿಗೆ ನಮಿಪೇಂ ॥ ೮೨ ॥

( ಅನಿರ್ವಾಚ್ಯ ವಾಚ್ಯಗುರು )

ಸದುಪಾಯ ಗಮ್ಯರೂಪಗೆ ।
ತದುಪಾಯವ ಶಿಷ್ಯರೊಳ್ಪ್ರವರ್ತಿಸುತಿಹಗಂ ॥
ಚಿದನಿರ್ವಾಚ್ಯಗೆ ವಾಚ್ಯಗೆ ।
ಮುದದಿಂ ಶಿವರೂಪಗುರುವಿಗಾನತನಪ್ಪೇಂ ॥ ೮೩ ॥

( ತಾರಕಗುರು )

ಕಾರಣಕಾರ್ಯಾತ್ಮನಿಗಂ ।
ಚಾರುಸುರೂಪಂಗೆ ರೂಪರಹಿತಗೆ ನಿಚ್ಚಂ ॥
ಸಾರತರಗಪ್ರಮೇಯಗೆ ।
ತಾರಕ ಶಿವರೂಪಗುರುವಿಗಾನತನಪ್ಪೆಂ ॥ ೮೪ ॥

( ಪ್ರಣವಾತ್ಮಕಗುರು )

ಗುಣಮೂಲಗೆ ಗುಣವಂತಗೆ ।
ಗುಣವರ್ಜಿತಭವ್ಯದಿವ್ಯರೂಪಾತ್ಮನಿಗಂ ॥
ಪ್ರಣುತಗಜನ್ಮಗೆ ಜನ್ಮಿಗೆ ।
ಪ್ರಣವಾತ್ಮಕಶಿವಗೆ ಗುರುವಿಗವನತನಪ್ಪೆಂ ॥ ೮೫ ॥

( ಭೇದಾಭೇದಗುರು )

ತನ್ನ ಸುತೇಜೋಜಾತಮ ।
ಹೊನ್ನತ ವಿಶ್ವಂಗಭೇದ ಭೇದಾಕೃತಿಗಂ ॥
ಭಿನ್ನ ಭವವಿಟಪಿಮೂಲಗೆ ।
ಸನ್ನುತ ಶಿವರೂಪ ಗುರುವಿಗವನತನಪ್ಪೆಂ ॥ ೮೬ ॥

( ನಿರ್ಮಾಯಗುರು )

ಎಲ್ಲರಿಗಾದ್ಯಗನಾದ್ಯಗೆ ।
ಬಲ್ಲಿದ ಮಾಯೆಯನು ಗೆಲ್ವಗಂ ಮಾಯಿಗೆ ದಲ್ ॥
ಎಲ್ಲಸರೂಪಗರೂಪಗೆ ।
ಬಲ್ಲಹ ಶಿವಮೂರ್ತಿಗುರುವಿಗವನತನಪ್ಪೆಂ ॥ ೮೭ ॥

( ಸರ್ವರೂಪಗುರು )

ಸರ್ವಮಹಾಮಂತ್ರಾತ್ಮಗೆ ।
ಸರ್ವಕಲಾತಂತ್ರಜಾಲರೂಪಾನ್ವಿತಗಂ ॥

ಸರ್ವಗೆ ಸರ್ವವ್ಯಾಪಿಗೆ ।
ಓರ್ವಗೆ ಶಿವರೂಪಗುರುವಿಗವನತನಪ್ಪೆಂ ॥ ೮೮ ॥

( ಸಚ್ಚಿದಾನಂದಗುರು )

ವರದಪ್ರಸಾದಮಂತ್ರದೆ ।
ಮೆರೆವ ಮನೋನಿಷ್ಠ ಸಚ್ಚಿದಾನಂದನಿಗಂ ॥
ಪರಮಾಗ್ನಿ ಷ್ಟೋಮಾತ್ಮಗೆ ।
ಪರತರ ಶಿವರೂಪಗುರುವಿಗವನತನಪ್ಪೆಂ ॥ ೮೯॥

( ಗುರುಪಾದೋದಕ ಮಹಿಮೆ )

ಕಡಲೇಳ್ಗಳ ಗಡಿವರೆಗಂ ।
ಪೊಡವಿಯೊಳಿಹ ಪುಣ್ಯತೀರ್ಥ ಮಜ್ಜನಫಲಮುಂ ॥
ಮೃಡಗುರುಪಾದೋದಕದಾ ।
ಕಡೆಹನಿಯ ಸಹಸ್ರದಂಶ ಫಲ ಸಮಮಲ್ಲಂ ॥ ೯೦ ॥

( ಹರನಿಂದಧಿಕ ಗುರು )

ಹರಮುನಿದರೆ ಗುರುಕಾಯ್ವಂ ।
ಗುರುಮುನಿದರದಾವನಿಲ್ಲಮಿಲ್ಲಂ ಕಾಯ್ವಂ ॥
ಗುರುತರಯತ್ನದೊಳದರಿಂ ।
ಗುರುವರನಂ ನೆರೆಸಮಾಶ್ರಯಿಪುದನವರತಂ ॥ ೯೧ ॥

( ಶಿವಶಕ್ತಿರೂಪಗುರು )

ಮಾತಿಗೆ ಮನಸಿಗತೀತಂ ।
ಶ್ವೇತಪ್ರಭೆರಕ್ತ ಶೋಭೆಗಳ್ಗತಿಭಿನ್ನಂ ॥
ಪೂತ ಶಿವಶಕ್ತಿರೂಪಂ ।
ಆತುರದಿಂ ನಮಿಪೆ ಗುರುಪದದ್ವಂದ್ವವನಾಂ ॥ ೯೨ ॥

( ತ್ರಿಮೂರ್ತಿರೂಪಗುರು )

ತ್ರಿಣಯನನಿಮಿಲ್ ಹರ ಸಾಕ್ಷಾತ್ ।
ಎಣಿಸಲ್ ತೋಳೆರಡನುಳ್ಳ ನಾರಾಯಣನುಂ ॥
ಗುಣಿ ನಾಲ್ಮೊಗಮಿಲ್ಲದಜಂ ।
ಪ್ರಣುತ ಶ್ರೀಗುರುವೆ ದೇವಿ ಪೇಳಲ್ಪಡುಗುಂ ॥ ೯೩ ॥

( ಭವಮೋಚಕ ಗುರು )

ಮುಗಿವೇಂ ಕೈಗಳನೆರಡಂ ।
ಮಿಗೆಕರುಣಾಸಾಗರದ ಮಹಾಸಿದ್ಧಿಗೆ ನಾಂ ॥
ಒಗೆಯಲನುಗ್ರಹಮುದರಿಂ ।
ಸೊಗದಿಂ ಜಂತುಗಳು ಭವವಿಮುಕ್ತಿಯುವಡೆಗುಂ ॥ ೯೪ ॥

( ಜ್ಞಾನದೃಷ್ಟಿಗೋಚರಗುರು )

ಗುರುವಿನ ಪರಮಂ ರೂಪಂ ।
ಅರುವಿನ ಸುವಿವೇಕದೃಷ್ಟಿಯೆನಿಪುದು ನಿಜದಿಂ ॥
ದುರದೃಷ್ಟರೆಂದು ನೋಡರ್ ।
ಕುರುಡರ್ ತಾವ್ ನೇಸರುದಯವಂ ಕಾಣದವೋಲ್ ॥ ೯೫ ॥

( ಸಂಧ್ಯಾತ್ರಯ ವಂದನೀಯಗುರು )

ಕುಲವಂ ಕುಲಕೋಟಿಗಳಂ ।
ಒಲವಿಂದುದ್ಧರಿಪುದರ್ಧನಿಮಿಷದಿ ನಿಜದಿಂ ॥
ಬಲವಂದು ಗುರುವಿನಂಘ್ರಿಯ ।
ನಲವಿಂದಭಿವಂದಿಸುವುದು ಸಂಧ್ಯಾತ್ರಯದೋಳ್ ॥ ೯೬ ॥

( ಗುರುವಿರ್ಪದಿಶೆಗೆ ವಂದನೆ )

ಶ್ರೀನಾಥ ಗುರುಪದದ್ವಯ ।
ಮೇನಾನುಂ ದಿಶೆಯೊಳೊಪ್ಪಿತೋರುತ್ತಿರ್ಕುಂ ॥

ತಾನಾದಿಶೆಗಂ ನಮಿಪುದು ।
ನಾನಾವಿಧ ಭಕ್ತಿಯಿಂದೆ ನಿತ್ಯಂ ಪ್ರಿಯಳೇ ! ॥ ೯೭ ॥

( ಸಾಷ್ಟಾಂಗ ವಂದನೆ )

ಗುರುವಂ ನಿತ್ಯಂ ಸ್ತುತಿಸುತ ।
ಸ್ಮರಿಸುವುದಷ್ಟಾಂಗಸಹಿತವಂದನೆಯಿಂದಂ ॥
ಚಿರಭಜನೆಯಿಂ ಸ್ಥಿರತ್ವಂ ।
ದೊರಕೊಳುತಂ ಸ್ವಸ್ವರೂಪಮಯನವನಪ್ಪಂ ॥ ೯೮ ॥
ಎರಡುತೋಳೆರಡುಕಾಲಿಂ ।
ದೆರಡುಂ ಮೊಣಕಾಲ್ಗಳಿಂದೆ ನಯನಗಳೆರಡಿಂ ॥
ಉರದಿಂದಂ ಶಿರದಿಂದಂ ।
ಸ್ಥಿರಮನದಿಂ ಪ್ರೀತಿನಿಂದೆಸಲೆಯಷ್ಟಾಂಗಂ ॥ ೯೯ ॥

( ಪುಷ್ಪಾಂಜಲಿ )

ಎಲ್ಲಿ ಗುರುಚಕ್ರವರ್ತಿಯು ।
ಎಲ್ಲಿರ್ಪಂ ಸೃಷ್ಟಿವಿಲಯನಾಟಕಕರ್ತಂ ॥
ಅಲ್ಲಿಯೆ ಪುಷ್ಪಾಂಜಲಿಯಂ ।
ಸಲ್ಲಿಪೆನಳಿಪುಂಜಗೀತದಿಂ ಮಂಜುಳಮಂ ॥ ೧೦೦ ॥

( ಪ್ರಾಣಾಯಾಮಕ್ಕಿಂತಲೂ ಗುರುಸೇವೆಯಿಂ ಸುಲಭಮುಕ್ತಿ )

ಪೊಸತೇಂ ಪ್ರಾಣಾಯಾಮಮಾ ।
ಭ್ಯಸಶತದಿಂ ವ್ಯಾಧಿದುಃಖದುರ್ಜಯಕರಣಂ ॥
ಎಸೆಯೆ ದಯೆ ನಶಿಸಿ ಪವನಂ ।
ಬಸಮಪ್ಪುದು ಮುಕ್ತಿ ಸೇವಿಸುವೆ ಗುರುವೋರ್ವಂ ॥ ೧೦೧ ॥

( ಜ್ಞಾನಕ್ಕಿಂತಲೂ ಗುರುಭಕ್ತಿ ಸುಲಭ )

ಜ್ಞಾನವನುಳಿದುಂ ಮುಕ್ತಿಯು ।
ಮೌನದಿ ಗುರುಭಕ್ತಿಯಿಂದ್ಲೆ ದೊರೆವುದು ಸುಲಭಂ ॥

ತಾನಿಲ್ಲಂ ಗುರುತತ್ವ |
ಜ್ಞಾನಕ್ಕಂ ಪೆರತು ಸಾಧನಂ ಶಿಷ್ಯನಿಗಂ || ೧೦೩ ||

( ತ್ರಿಕರಣ ಸೇವೆ )

ಗುರುವಿಂ ಪರತರಮಿಲ್ಲಂ |
ನೆರೆ ಸಾರ್ಗುಂ ನೇತಿನೇತಿ ಯೆನುತಂ ಶ್ರುತಿ ತಾಂ ||
ಸ್ಥಿರಮಿಹುದಾರಾಧಿಸುತಂ |
ಗುರುವಂ ಮನಮಾತುಮೈಗಳಿಂದಂ ಸತತಂ || ೧೦೪ ||

( ತ್ರಿಮೂರ್ತಿಗಳ್ಗೆ ಅಧಿಕಾರದಾನ )

ಗುರುವಿನ ದಯಾಪ್ರಸಾದದಿ |
ಹರಿಹರವಿಧಿಗಳ್ ಸ್ಥಿತಿಪ್ರಲಯಸೃಷ್ಟಿಗಳಾ ||
ವರಸಾಮರ್ಥ್ಯವ ಪಡೆದರ್ |
ದೊರೆವುದು ಗುರುಸೇವೆಯಿಂದೆ ಕೈವಲ್ಯಪದಂ || ೧೦೫ ||

( ದೇವಕಿನ್ನರರಿಂಗವ್ಯ )

ಸುರಕಿನ್ನರಗಂಧರ್ವರ್ |
ವರತುಂಬುರಯಕ್ಷಪಿತೃಗಳೆಲ್ಲರ್ ನಿಜದಿಂ ||
ದರಿಯರ್ ಮುನಿಗಳ್ ಮನುಗಳ್ |
ಗುರುಶುಶ್ರೂಷೆಯ ಸುಕರ್ಮನಿರ್ಮಲವಿಧಿಯಂ || ೧೦೬ ||

( ಗುರುಭಕ್ತಿಯಿಲ್ಲದೆ ಋಷ್ಯಾದಿಗಳ ಭ್ರಮಣ )

ಪಿರಿದುಂ ಮದಭಾವಯುತರ್ |
ವರವಿದ್ಯಾಬಲದಿ ತಪದ ಬಲದಿಂ ಮತ್ತಂ ||
ತಿರೆಯೊಳ್ ತಿರುಗುತ್ತಿರ್ಪರ್ |
ನರರಾಭವ ಕುಹರದೊಳ್ ಘಟೀಯಂತ್ರದವೋಲ್ || ೧೦೭ ||

ಸುರನರಗಂಧರ್ವರುಕಿ ।
ನ್ನರರುಂ ಪಿತೃದೇವತೆಗಳು ಯಕ್ಷರುಗಳ್ ಮೇಣ್ ॥
ಪರಮರ್ಷಿಸಿದ್ಧಸಾಧ್ಯರು ।
ಗುರುಸೇವೆಗೆ ಹಿಮ್ಮುಖರ್ ವಲಂ ಫಲಮೊಂದರ್ ॥ ೧೦೭ ॥

( ಗುರುಭಕ್ತಿಯಿಂ ಭುಕ್ತಿಮುಕ್ತಿ )

ಪಾರ್ವತಿ ಕೇಳ್ ಧ್ಯಾನವ ನೀ ।
ನುರ್ವರೆಯೊಳ್ ಸರ್ವಸೌಖ್ಯಕರವಂ ಸ್ಥಿರವಂ ॥
ಸರ್ವರಿಗೆ ನಿಜಾನಂದಂ ।
ಸಾರ್ವುದು ಸಾಯುಜ್ಯಮುಕ್ತಿಭುಕ್ತಿಗಳಕ್ಕುಂ ॥ ೧೦೮ ॥

( ಹೃನ್ಮಧ್ಯದಿ ಗುರಮೂರ್ತಿ ಧ್ಯಾನಂ )

ಹೃದಯಾಬ್ಜ ಕರ್ಣಿಕೆಯುವು ।
ಧ್ಯದ ಸಿಂಹಾಸನದಿ ದಿವ್ಯಗುರುಮೂರುತಿಯಂ ॥
ಮೃದುಚಂದ್ರಕಳೆಯೊಲಿಹನಂ ।
ಮುದದಿಂ ಧ್ಯಾನಿಪುದು ಸಚ್ಚಿದಾನಂದದನಂ ॥ ೧೦೯ ॥
ಬಿಳುವಟ್ಟೆಯು ಚೆಳ್ದಾವರೆ ।
ಬಿಳಿಬಾಪನ್ನದೊಳು ಮುತ್ತುದೊಡವಿಂ ಪೊಳೆವಾ ॥
ಎಳನಗುವೊಗನಂ ಸೊಗನಂ ।
ತಳೆದೆಡದೊಡೆ ಶಕ್ತಿಸಹಿತ ಸುದಯಾನಿಧಿಯಂ ॥ ೧೧೦ ॥

( ಪಂಚಕೃತ್ಯಕಾರಣ ಗುರು )

ಸೃಷ್ಟಿಸ್ಥಿತಿ ಲಯನಿಗ್ರಹ ।
ಮಿಪ್ಪದನುಗ್ರಹದ ಪಂಚಕೃತ್ಯಮುದಾರಿಂ ॥
ಸ್ಪಷ್ಟಪ್ರಕಾಶಮಪ್ಪುವು ।
ತಜ್ಜಿದ ಶಿವರೂಪಗುರುವ [illegible] ನಿತ್ಯಂ ॥ ೧೧೧ ॥

( ಶಕ್ತಿವಿಶಿಷ್ಟಗುರುಧ್ಯಾನಂ )

ಉದಯದಿ ಶಿರದಸಿತಾಬ್ಜದಿ |
ಸದಮಲಗುರುವಂ ದ್ವಿನೇತ್ರನಂ ದ್ವಿಭುಜನಂ ||
ಪದುಳದೊಳೆಡದೊಳ್ ರಂಜಿಪ |
ಮುದಿತಾತ್ಮಸುಶಕ್ತಿಯಿಂ ಸದಾಪೂಜಿತನಂ || ೧೧೨ ||

( ಗುರುವೇ ಪರಬ್ರಹ್ಮ )

ಗುರುಚಿದ್ಬ್ರಹ್ಮವ ಭಜಿಪೇಂ |
ಗುರುಸಚ್ಚಿದ್ಬ್ರಹ್ಮವೆಂದು ಸಾರುವೆ ಸತತಂ ||
ಗುರುಚಿದ್ಬ್ರಹ್ಮವ ನೆನೆವೇಂ |
ಗುರುವೇ ತಾಂ ಬ್ರಹ್ಮವೆಂದು ನಮಿಪೇಂ ಮುದದಿಂ || ೧೧೩ ||

( ಬ್ರಹ್ಮಾನಂದ ಗುರುಧ್ಯಾನಂ )

ಭಾ||ಷ|| ಗಗನಸಮನದ್ವಂದ್ವಸುಖದಂ |
ತ್ರಿಗುಣರಹಿತಂ ಸಾಕ್ಷಿಭೂತಂ |
ಬಗೆಗತೀತಪುನೀತನೀತಂ ತತ್ವಮಸಿಲಕ್ಷ್ಯಂ ||
ಬಗೆಯೆ ಕೇವಲನಚಲನಮಲಂ |
ಸುಗಮಚಿದ್ಬ್ರಹ್ಮಸುಖನೇಕಂ ||
ಸೊಗದಿ ನಮಿಪೇಂ ನಿತ್ಯನಂ ಸನ್ನುತ್ಯನಂ ಗುರುವಂ || ೧೧೪ ||
ಆನಂದನು ಪ್ರಸನ್ನನು |
ಮಾನಂದಕರಂ ಕರಂ ಭವಾಮಯಭಿಷಜಂ ||
ಮೌನೀಂದ್ರಂ ನಿಜಬೋಧಂ |
ನಾನಿಂದುಜ್ಞಾನರೂಪ ಗುರುವಂ ನಮಿಪೇಂ || ೧೧೫ ||

( ಶಿವಾನುಭವಾನಂದದಾಯಕಗುರು )

ಭವಹಾಲಾಹಲನೋಹದ |
ತವೆ ಶಾಂತಿಗೆ ಗುಳಿಗೆಯೆನಿಪುದು ಗುರುಪಾದಾಬ್ಜಂ ||

ಶಿವರೂಪನ ನಮಿಪೆನೆವಂ ।
ಜವದಿ ಶಿವಾನುಭವ ಸೌಖ್ಯಸಾಗರ ಚಂದ್ರಂ ॥ ೧೧೬ ॥

( ಸಹಸ್ರದಳ ಚಕ್ರಗತಗುರು )

ತನ್ನ ಪದಾಬ್ಜದೊಳಾಶ್ರಿತ ।
ರುನ್ನತಸಂಸಾರವನಕೆ ದಾವಾನಲನಂ ॥
ಚೆನ್ನಬ್ರಹ್ಮಸುರಂಧ್ರದಿ ।
ಸನ್ನುತ ವಿಧುಮಂಡಲದಿಸಿತಾಬ್ಜದೊಳಿಹನಂ ॥ ೧೧೭ ॥

( ಉನ್ಮನಿಗತಗ ರು )

ಸಾಸಿರದಳವುಂಡಿತದೊಳ್ ।
ಭಾಸುರದಉಮಾಕ್ಷರತ್ರಿರೇಖಾಂಬುಜದೊಳ್ ॥
ಸೂಸುವಹಂಸನ ಪಕ್ಷದಿ ।
ನಾಸಿಕದುನ್ಮನಿಯ ನಡುವೆ ಗುರುವಂಸ್ಮರಿಪೇಂ ॥ ೧೧೮ ॥

( ಸಚ್ಚಿದಾನಂದಗುರು )

ನಿತ್ಯನಿರಾಭಾಸಂ ಸ ।
ನ್ನುತ್ಯನಿರಾಕಾರನುಂ ನಿರಂಜನನುಂ ತಾಂ ॥
ಅತ್ಯಮಲಚಿದಾನಂದಂ ।
ಸತ್ಯಗುರುಬ್ರಹ್ಮನಂ ಸುಬೋಧನ ನಮಿಪೇಂ ॥ ೧೧೯ ॥

( ಅದ್ವೈತದೃಷ್ಟಿಗುರು )

ಭಾ॥ಷ॥ ಸಕಲಭುವನಾವಳಿಯಸೃಷ್ಟಿಯು ।
ಸಕಲಕಲ್ಪಿತ ಜಗದಸೃಷ್ಟಿಯು ।
ಸಕಲನಿಗಮದಿ ತತ್ಪದಾರ್ಥದೊಳೇಕಶುಭದೃಷ್ಟಿ ॥
ಸಕಲಶಿವಗಣಸುಹಸಮಷ್ಟಿಯು ।

ಸಕಲ ಸದ್ವಸ್ತುಗಳ ಸೃಷ್ಟಿಯು |
ಸಕಲಗುಣಪರಮೇಷ್ಠಿ ಮೋಕ್ಷಾದ್ವೈತಸದ್ದೃಷ್ಟಿ || ೧೨೦ ||

( ವಿಶ್ವಧರ್ಮಸೃಷ್ಟಿಗುರು )

ವಿಶ್ವರಂಗಸ್ತಂಭಯಷ್ಟಿಯು |
ವಿಶ್ವಮತಧರ್ಮಗಳ ಸೃಷ್ಟಿಯು |
ವಿಶ್ವಕರುಣಾರಸದ ವೃಷ್ಟಿ ಸು ತತ್ವದ ಸಮಷ್ಟಿ ||
ಶಾಶ್ವತಚಿದಾನಂದದೃಷ್ಟಿಯು |
ವಿಶ್ವಶಿಷ್ಯಾಪಳಿಸುತುಷ್ಟಿಯು |
ಶಶ್ವದೆನ್ನೊಳ್ನಿಲ್ಗೆ ಸದ್ಗುರುದಿವ್ಯದೃಷ್ಟಿಯು ತಾಂ || ೧೨೧ ||

( ಗುರುಸರ್ವೋತ್ತಮತ್ವ )

ಗುರುವಿಂದಮಧಿಕವಿಲ್ಲಂ |
ಗುರುವಿಂದಿಲ್ಲಧಿಕವಿಲ್ಲ ಗುರುವಿಂದಧಿಕಂ ||
ಹರಶಾಸನ ಶಾಸನದಿಂ |
ಹರಶಾಸನದಿಂದೆ ಹರನ ಶಾಸನದಿಂದಂ || ೧೨೨ ||

( ಶಿವನೇಗುರು )

ಇದುವೇ ಶಿವಮಿದುವೇ ಶಿವ |
ಮಿದುವೇ ಶಿವಮಿದುವೆಶಾನೆ ಶಿವಮೆಂದೆನಿಕುಂ ||
ಇದು ನನ್ನಯ ಶಾಸನದಿಂ |
ಇದು ಶಾಸನದಿಂದಲೆನ್ನ ಶಾಸನದಿಂದಂ || ೧೨೩ ||
ಅರಿತೇನರಿತೇ ನರಿತೇಂ |
ಅರಿತೇಂ ನಿರ್ಜನನನು ವಿಜನನಂ ವಿಗತಜನಂ ||
ಹರಿಯಾಶಾಸನದಿಂದಂ |
ಹರಿಶಾಸನದಿಂದೆ ಹರಿಯ ಶಾಸನದಿಂದಂ || ೧೨೪ |

( ಗುರುಧ್ಯಾನದಿಂಜ್ಞಾನಂ )

ಈತೆರಗುರುವಂ ಧ್ಯಾನಿಸೆ ।
ಏತರ ಮಾತಾಗಳುದಿಸುವುದು ಸುಜ್ಞಾನಂ ॥
ಓತಾಗಳ್ ಗುರುಬೋಧದೊ ।
ಳಾತನೆ ತಾಂ ಮುಕ್ತನೆಂದು ಭಾವಿಸುತಿರ್ಕುಂ ॥ ೧೨೫ ॥

( ಗುರೂಪದೇಶದಿಂ ಚಿತ್ತಶುದ್ಧಿ )

ಗುರುವಿನುಪದೇಶಮಾರ್ಗದೊ ।
ಳುರುಮಾನಸ ಶುದ್ಧಿಯಂ ಸಮಾರಾಧಿಪುದೈ ॥
ಸ್ಥಿರಮಲ್ಲ ವಿಶ್ವಮೆಲ್ಲಂ ।
ನೆರೆಗೋಚರಮಾವುದದನೆ ಖಂಡಿಸುತಿರ್ಕುಂ ॥ ೧೨೬ ॥

( ಜ್ಞಾತೃಜ್ಞಾನಜ್ಞೇಯವಿಚಾರ )

ಜ್ಞೇಯಮದೆಲ್ಲಮತೀತಂ ।
ಆಯೊಾಯಿಂದ್ರಿಯದೆ ತಿಳಿವಮನವೇ ಜ್ಞಾನಂ ॥
ಜ್ಞೇಯಜ್ಞಾನಗಳೆರಡಂ ।
ನ್ಯಾಯದಿ ಸಮಗೊಳಿಸಲಿನ್ನು ಮನ್ಯಮದಿಲ್ಲಂ ॥ ೧೨೭ ॥

( ಗುರುದಯೆಯಿಂ ನಿಜಶಾಂತಿ )

ನಾನಾಮಾತುಗಳಿಂದೇಂ ।
ನಾನಾಶತಶಾಸ್ತ್ರದಿಂದೆ ಜನಕಂ ಮನಕಂ ॥
ಏನೇಸಿಲ್ ವಿಶ್ರಾಂತಿಯು ।
ಜ್ಞಾನೀಶ್ವರ ಗುರುಕೃಪಾಕಟಾಕ್ಷವ ನುಳಿಯಲ್ ॥ ೧೨೮ ॥

( ಬ್ರಹ್ಮಾನಂದದಾಯಕಗುರು )

ಕರುಣೆಯ ಖಡ್ಗದ ತುದಿಯಿಂ ।
ತರಿಯುತೆ ಶಿಶುರೂಪ ಶಿಷ್ಯಪಾಶಾಷ್ಟಕಮಂ ॥

ಪರಮ ಬ್ರಹ್ಮಾನಂದವ ।
ನಿರದೀಯುವನವನೆ ತಾನೆ ಸದ್ಗುರು ವೆನಿಕುಂ ॥ ೧೨೯ ॥

( ಗುರುಗೀತಾಪಠನ ಫಲಂ )

ತಿಳಿಯುವುದೀತೆರದಿಂದಂ ।
ಗಳಿಲನೆ ಗುರುವಂ ನಿಜೇಷ್ಟಗಳ ನೀಡುವನಂ ॥
ತಿಳಿಮನದಿಂದೆರಗುತೆ ನಿ ।
ರ್ಮಳ ಗುರುಗೀತೆಯನು ಪಠಿಸುಗುಂ ವಿದ್ವಾಂಸಂ ॥ ೧೩೦ ॥

( ಗುರುವಂದನ ಫಲಂ )

ಹೆಚ್ಚುವುದತಿಸೌಭಾಗ್ಯಂ ।
ನಿಚ್ಚದಿ ಜಸಮಾಯುಷಂ ಮಹೋದಯನಿವಹಂ ॥
ಎಚ್ಚತ್ತುದಯದಿ ಹಬ್ಬದಿ ।
ಮೆಚ್ಚುತೆ ಗುರುಮೂರ್ತಿಯಂ ಸದಾ ವಂದಿಸುಗುಂ ॥ ೧೩೧ ॥

ಗುರುದೇವನ ವಂದನದಿಂ ।
ನೆರೆ ಸಂತುಷ್ಟಾತ್ಮರಪ್ಪರಮರಗಣಂಗಳ್ ॥
ಕರೆದೀವರೆಲ್ಲಭೀಷ್ಟವ ।
ಗುರುಭಕ್ತಗೆ ಭೋಗಮೋಕ್ಷಚಿರಸಂಪದವಂ ॥ ೧೩೨ ॥

( ಮಾನವರೂಪದ ಗುರು )

ಮಾನವಚರ್ಮವ ಪೊದೆಯುತೆ ।
ತಾನೆ ಸದಾಶಿವನೆ ತೋರುತಿರ್ಪಂ ಸಾಕ್ಷಾತ್ ॥
ಧ್ಯಾನಿಪಶಿಷ್ಯಸಮೂಹಕೆ ।
ಸಾನುಗ್ರಹದೀಕ್ಷೆಗಾಗಿಭುವಿಯೊಳ್ ಚರಿಪಂ ॥ ೧೩೩ ॥

( ಪುಣ್ಯಪಾಪಿಗಳ ದೃಷ್ಟಿಭೇದ )

ಹರನೋಲ್ ತೋರ್ಪಂ ಸಾಕ್ಷಾತ್ ।
ಗುರುವೇ ತಾಂ ಪುಣ್ಯಕರ್ಮಿಗಳ ಕಂಗಳ್ಗಂ ॥
ನರನೋಲ್ ತೋರ್ಪಂ ಸಾಕ್ಷಾತ್ ।
ಗುರುವೇಂ ತಾಂ ಪಾಪಕರ್ಮಿಗಳ ಕಂಗಳ್ಗಂ ॥ ೧೩೪ ॥

( ಗುರುನಿಂದಾಫಲಂ )

ಈತೆರದಿಂ ಕೇಳ್ದು ಶಿವೇ ! ।
ಪಾತಕಿ ಗುರುನಿಂದೆಯಂ ನೆಗಳ್ಪವನಾವಂ ॥
ಆತನೆ ಪೊಂದುವ ನರಕವ ।
ಯಾತನೆಯಿಂ ಚಂದ್ರಸೂರ್ಯರಿರ್ಪನ್ನೆವರಂ ॥ ೧೩೫ ॥

( ಗುರುವಿನಬಗ್ಗೆ ವಿಕಲ್ಪವಿಲ್ಲದಿರುವಿಕೆ )

ಕಲ್ಪಾಂತರಮುಂ ದೇವಿ ।
ಕಿಲ್ಪವನುಳಿದೇಕ ಮನದೆ ನೆನವುದು ಗುರುವಂ ॥
ಸ್ವಲ್ಪವು ಗುರುವಿಗೆ ಲೋಪವ ।
ಕಲ್ಪಿಸಲಾಗದು ಮನಸ್ವಿಯೆನೆ ಭಾವಿಸುವಂ ॥ ೧೩೬ ॥

( ಗುರುಸನ್ನಿಧಿಯಲ್ಲಿಯ ವರ್ತನೆ )

ನುಡಿಯಲ್ ಸಲ್ಲದು ಹುಮ್ಮೆನು ।
ತೊಡನಾವ್ಯಡರೂಪಗುರುವಿನಾಮುಂಗಡೆಯೋಳ್ ॥
ನುಡಿಯಲ್ ಬಾರದಸತ್ಯವ ।
ಕಡೆತನಕಂ ಪ್ರಾಜ್ಞರೆನಿಪ ಶಿಷ್ಯರದೆಂದುಂ ॥ ೧೩೭ ॥

(ಗುರುಸನ್ನಿಧಿಯಲ್ಲಿ ದುರ್ವರ್ತನೆಯ ಫಲ)

ಗುರುವಿನ ಸನ್ನಿಧಿಯೊಳ್ ಬಲು ।
ಹರಟುತಹಂ ಕರಿಸುತಿರದೆಹುಂಕರಿಪುದರಿಂ ॥
ನೆರೆ ನಿರ್ಜನ ಘೋರಾಟವಿ ।
ಸಂಸರದೊಳ್ ಬ್ರಹ್ಮರಾಕ್ಷಸಂ ತಾನೆನಿಪಂ ॥ ೧೩೮ ॥

(ಗುರುವಚನ ಪಾಲನೆ)

ಗುರುವಚನಮಲಂಘ್ಯಂ ತಾಂ ।
ಗುರುವೊಪ್ಪಿತವಿಲ್ಲದಾವುದುಂ ತರವಲ್ಲಂ ॥
ಗುರುಭಕ್ತಿಭಾವಭರಿತಂ ।
ಗುರುವಿರ್ಪಾದಶೆಗೆ ನಮಿಸದೇಳ್ಪುದಭದ್ರಂ ॥ ೧೩೯ ।

ಗುರುಮಠವಡೆ ಪುಣ್ಯಾಶ್ರಮ ।
ತರಲಾಗದು ಪಾದುಕೆಯನು ದುಷ್ಪಾನಂಗಳ್ ॥
ತರವಲ್ಲ ದೀಕ್ಷೆ ಟೀಕೆಯು ।
ಹಿರಿತನವಾಜ್ಞಾಪನ ಪ್ರವಚನವ ಯೋಗ್ಯಂ ॥ ೧೪೦ ॥

ಗುರುಸಮಪೀಠವು ಕೂಡದು ।
ಗುರುಮುಂಚದಿ ಕೂಡಬಾರದಾಗುರುವೆದುರೊಳ್ ॥
ಚರಣವ ಚಾಚಲ್ಬಾರದು ।
ಸಂಭೋಗಿಸಲಾಗದಾಟವಾಡ್ಪುದಯೋಗ್ಯಂ ॥ ೧೪೧ ॥

(ಗುರುದಾಸತ್ವ)

ಗುರುತಾಂಪೇಳ್ದ ಪ್ಪಣೆಯಂ ।
ಸಂಗಡಿಸದೆ [illegible] ॥

ನಿರುತಂ ಸಲ್ಲಿಸುತಾಜ್ಞೆಯ ।
ವಿರವೇಳ್ಕುಂ ದಾಸನಾಗಿ ಗುರುಸನ್ನಿಧಿಯೋಳ್ ॥ ೧೪೨ ॥

( ಗುರುಪ್ರಸಾದಲೋಭತೆ )

ಗುರು ಕರದಿಂ ಕೊಡದಲ್ಲದೆ ।
ಪರಿಭುಂಜಿಸಲಾಗದಿಷ್ಟಭೋಜ್ಯಾದಿಗಳಂ ॥
ಗುರುವಲ್ತಿಯೊಳೀಯಲ್ ಸ್ತ್ರೀ ।
ಕರಿಪುದು ಜಿಪುಣನೊಲು ಜೀವಪೋಷಣೆಮಾತ್ರಂ ॥ ೧೪೩ ॥

( ಪಾದ ಸ್ಪರ್ಶ ನಿಷೇಧ ಗುರುವಸ್ತುಗಳು )

ಗುರುಶಯ್ಯೆಯು ಗುರುಪಾದುಕೆ ।
ಗುರುದೇವನ ವಸನಮಾಸನಾದಿಕಮೆಲ್ಲಂ ॥
ಶಿರದಿಂದೆರಗುತಲವುಗಳ ।
ಚರಣದಿ ಸೋಂಕಿಸಲುಬಾರದೈ ಗುರುಭಕ್ತಂ ॥ ೧೪೪ ॥
ಗುರುವಿನ ಹಿಂಭಾಗದೊಳೇ ।
ಚರಿಸುತೆ ತಾಂ ತುಳಿಯಲಾಗದಾತನ ನೆರಳಂ ॥
ವರವೇಷಭೂಷಣಗಳಂ ।
ಗುರುವಿದಿರೋಳ್ ಧರಿಸಿ ಮೆರೆಯುವುದು ತರವಲ್ಲಂ ॥ ೧೪೫ ॥

( ಗುರುನಿಂದಕನ ಶಾಸನ )

ಗುರುನಿಂದೆಯ ಮಾಳ್ಪವನಾ ।
ತರಿವುದು ನಾಲಿಗೆಯನಲ್ಲದಿರ್ದೊಡವಾಗಳ್ ॥
ಪರಿದೋಡುವುದಲ್ಲದೊಡಂ ।
ನೆಲೆ ಶಿಕ್ಷಿಸುತಲಲ್ಲಿ ನಿಲ್ಲಲಾಗದು ಶಿಷ್ಯಂ ॥ ೧೪೬ ॥

( ಗುರೂಚ್ಛಿಷ್ಟದಬಗ್ಗೆ ಆಚರಣೆ )

ಗುರುವುಚ್ಛಿಷ್ಟವ ಪರರಿಂಗೆ ।
ಕರೆದೀಯಲ್ ಬಾರದೆಂದುಮವನಪ್ಪಣೆಯಂ ॥
ನೆರೆ ತಾಂ ಮೀರಲ್ಬಾರದು ।
ಪೊರಡುವುದುಚ್ಛಿಷ್ಟವೆಲ್ಲವಂ ಸಲೆ ಕೊಳುತಂ ॥ ೧೪೭ ॥

( ಗುರುನಿರೂಪ ಪಾಲನೆ )

ಗುರುಸನ್ನಿಧಿಯೊಳಸತ್ಯವು ।
ಕರಮಪ್ರಿಯವುಂ ಸಗರ್ವ ಬಹುಭಾಷಿತಮುಂ ॥
ತರವಲ್ಲ ಗುರುವಿಗಾಜ್ಞೆಯ ।
ನೆರೆ ಪೇಳದೆ ಗುರುನಿರೂಪಮಂ ಸಲೆಮಾಳ್ಕುಂ ॥ ೧೪೮ ॥

( ನಮ್ರವಚನಂ )

ನುಡಿವುದು ತಾಂ ಗೌರವದಿಂ ।
ದೊಡೆಯನೆ! ಕುಲಪತಿಯೆ! ದೇವನೇ! ಸ್ವಾಮಿಗಳೇ! ॥
ಮೃಡ! ಯೋಗಿರಾಜನೆ ನುತಂ ।
ನಡುಗುತೆ ನುಡಿಯುತ್ತೆ ನಮ್ರನಾಗಿಹುದನಿಶಂ ॥ ೧೪೯ ॥

( ಶಾಪಮೃತ್ಯು ವಿಮೋಚನಗುರು )

ಪನ್ನಗರಿಂ ಮುನಿವರರಿಂ ।
ದುನ್ನತಸುರರಿಂದೆ ಶಪಿತನಾದರು ಸಹಿತಂ ॥
ಸನ್ನಿಹಿತಮೃತ್ಯುಭಯದಿಂ ।
ತನ್ನ [illegible] ಮೃತ್ಯುಂ ಗೆಲ್ದಪೆ ॥ ೧೫೦ ॥

( ದುಸ್ಸಾಧ್ಯಗುರುಶಾಪಂ )

ಅಸಮರ್ಥರ್ ವಿಬುಧಾದಿಗ |
ಳಸಮರ್ಥರ್ ಮನುಮುನೀಶರೆಲ್ಲರು ಸಹಿತಂ ||
ಅಸಮಗುರುಶಾಪಗತನಂ |
ಅಸದಳವಿೂನೂರುಲೋಕದೋಳ್ ಕಾಪಾಡಲ್ || ೧೫೧ ||

( ಗುರುಶಬ್ದವೇ ಮಂತ್ರರಾಜಂ )

ಇದು ಮಂತ್ರರಾಜಮೆನಿಕುಂ |
ಸದಮಲ ಗುರುವೆಂಬ ವರ್ಣಯುಗಳಂ ದೇವೀ ||
ವಿದಿತಸ್ಮೃತಿವೇದಾದಿಯೊ |
ಳುದಿತಾರ್ಥಂ ಪರಮಪದವು ಗುರುವೇ ಸಾಕ್ಷಾತ್ || ೧೫೨ ||

( ಕಪಟಸನ್ಯಾಸಿ ನಿಜಸನ್ಯಾಸಿ )

ಸನ್ಮಾನಾತಿಥ್ಯಾರ್ಥಂ |
ಸನ್ಮುನಿಯೋಲ್ ಕಾವಿಕಂಥದಂಡವ ತಳೆದುಂ ||
ಸನ್ಮತ ಕಿತ್ತಡಿಯಲ್ಲಂ |
ಚಿನ್ಮಯಸುಜ್ಞಾನಿಯವನೆಸನ್ಯಾಸಿಯು ತಾಂ || ೧೫೩ ||

( ಗುರುಪಾದಸೇವೆಯಿಂ ಜ್ಞಾನಿಗಳೇ ನಿಜ ಸನ್ಯಾಸಿಗಳು )

ಗುರುಚರಣಸೇವೆಯಿಂದಂ |
ಪರತತ್ವಮಸೀತಿ ಸೂಕ್ತಿಸಾರವನರಿದರ್ ||
ವರಸನ್ಯಾಸಿಗಳೆನಿಪರ್ |
ಪೆರರೆಲ್ಲರ್ ವೇಷಧಾರಿಸನ್ಯಾಸಿಗಳೈ || ೧೫೪ ||

( ದೀಪದೀಪಾಂತರದಂತೆ ಬ್ರಹ್ಮಪ್ರಕಾಶಕ ಗುರು )

ನಿತ್ಯ ನಿರಾಕೃತಿ ನಿರ್ಗುಣ ।
ಸತ್ಯಪರಬ್ರಹ್ಮತತ್ವವಂ ಬೋಧಿಸುವಂ ॥
ಸ್ತುತ್ಯಬ್ರಹ್ಮವ ಬೆಳಗುವ ।
ನತ್ಯಧಿಕಂ ದೀಪವಂ ಪ್ರದೀಪಾಂತರದೋಲ್ ॥ ೧೫೫ ॥

( ಗುರುಪ್ರಸಾದದಿಂದಾತ್ಮಜ್ಞಾನಂ )

ಗುರುವಿನ ದಯಾಪ್ರಸಾದದೆ ।
ನೆರೆ ಕಾಂಬಂ ತಾನೆ ತನ್ನೊಳಾತ್ಮಾರಾಮಂ ॥
ಪರಮುಕ್ತಿಮಾರ್ಗಮಿದರಿಂ ।
ದೊರೆಕೊಳ್ವುದು ದಿವ್ಯದುರ್ಲಭಾತ್ಮಜ್ಞಾನಂ ॥ ೧೫೬ ॥

( ಜಗನ್ಮಯಗುರು )

ಸ್ತಂಭಾದಿಬ್ರಹ್ಮಾಂತಂ ।
ಗುಂಭಿತಪರಮಾತ್ಮಚಿತ್ಸ್ವರೂಪಕಗುರುವಂ ॥
ಜೃಂಭಿತಸಚರಾಚರನಾ ।
ರಂಭಿತಯೋಗನ ಜಗನ್ಮಯನಸಾಂನಮಿಪೇಂ ॥ ೧೫೭ ॥

( ವಾದಕೆ ಸಿಲ್ಕದಗುರು )

ಅದು ಪರವಿದು ಪರವೆನುತಂ ।
ಅದು ಪರನಲ್ಲೆನುತಲದರ ದೂರದೆ ನುಡಿವರ್ ॥
ಅದರಂತರದೆಲ್ಲೆಡೆಯೋ ।
ಳದಕೆಲ್ಲಕೆ ಬಾಹ್ಯದಲ್ಲಿ ವಾದಿಸುತಿರ್ಪರ್ ॥ ೧೫೮ ॥

( ಭೇದಾತೀತ ಜಗದ್ಗುರು )

ನಿತ್ಯ ಸಂಪೂರ್ಣ ನಿರ್ಗುಣ।
ನುತ್ಯನಿರಾಕಾರನಂ ನಿಜಾತ್ಮಸ್ಥಿತನಂ ॥
ಸತ್ಯದಿ ಭೇದಾತೀತನ ।
ನತ್ಯಧಿಕ ಜಗದ್ಗುರುವ ನಮಿಪೆ ಸಚ್ಚಿತ್ಸುಖನಂ ॥ ೧೫ ॥

( ಹೃದಯದಿಸ್ಫಟಿಕಪ್ರಕಾಶಗುರು )

ಧ್ಯೇಯಪರಾತ್ಪರತರನಿ ।
ರ್ಮಾಯನ ನಿಜಸುಖವನೀಯುತಿಹ ಶಾಶ್ವತನಂ ॥
ಆಯತಹೃದಯಾಕಾಶದೊ ।
ಳೀಯಮಲಸ್ಫಟಿಕಕಾಂತಿಯುತನಂನಮಿಪೇಂ ॥ ೧೬೦ ॥

( ಸೋಽಹಂಭಾವ ವಿವರಣೆ )

ಸ್ಫಟಿಕಸಮಾನಂ ರೂಪಂ ।
ಸ್ಫುಟಮಾದರ್ಪಣದೆ ತೋರುತಿಹುದೆಂತುಂ ತಾಂ ॥
ದಿಟಮಾತ್ಮನೊಳು ಚಿದಾಕೃತಿ ।
ಘಟಿಸುವುದಾನಂದಮದುವೆ ಸೋಽಹಂಭಾವಂ ॥ ೧೬೧ ॥

( ಭಾವಲಿಂಗ-ಸ್ವರೂಪಗುರು )

ಅಂಗುಷ್ಠಮಾತ್ರಪುರುಷಂ ।
ಲಿಂಗಮಿದೇ ಧ್ಯೇಯ ಗೇಯ ಸಚ್ಚಿನ್ಮಯ ತಾಂ ॥
ಮಂಗಲಹೃದಯದಿ ತೋರ್ಪುದು ।
ನೀಂ ಗಡ ಕೇಳೊರೆವೆ ಭಾವಲಿಂಗಂ ಸ್ಫುರಿತಂ ॥ ೧೬೨ ॥

( ಅಣುವಿಗೆ ಅಣು ಮಹತಿಗೆ ಮಹತ್ತುಗುರು )

ಅಜನುಂ ಹರಿಹರನೀತಂ |
ಕುಜನನ ಮೃತಿರಹಿತನವ್ಯಯಂ ನಿರ್ವಿಕೃತಂ ||
ಸುಜನ ಚಿದಾನಂದಂ ತಾಂ |
ನಿಜವಣುವಿಂಗಣುವು ಮಹತಿಗೆಲ್ಲಮಹಾಂತಂ || ೧೬೩ ||

( ಗುರುತತ್ವ ನಿರೂಪಣೆ )

ಅಪರಮಪೂರ್ವಂ ನಿತ್ಯಂ |
ಸ್ವಪರಂಜ್ಯೋತಿಯು ನಿರಾಮಯನುಮವ್ಯಯನುಂ ||
ವಿಪುಲಾಕಾಶಂ ಧ್ರುವನುಂ |
ಸುಪರಮಾನಂದರೂಪನುಂ ವಿರಜಂ ತಾಂ || ೧೬೪ ||

( ಗುರುಪರಬ್ರಹ್ಮಂ )

ಪೊಂದಲಸಾಧ್ಯಮಗೋಚರ |
ಮೆಂದೆಂದುಂ ನಾಮರೂಪಪರಿವರ್ಜಿತಮುಂ ||
ಸಂದೆಯಮೇಂ ನಿಶ್ಯಬ್ದಮಿ |
ದೆಂದರಿ ನೀಂ ಗಿರಿಜೆಬೊಮ್ಮವನು ಭಾವದಿದತಾ || ೧೬೫ ||

( ಅವಿನಾಭಾವಶಕ್ತಿ ವಿಶಿಷ್ಟಬ್ರಹ್ಮ )

ಚಂದನದಿ ಕರ್ಪುರದಿ ಯರ |
ವಿಂದದಿ ಗಂಧಸ್ವಭಾವಮೆಂತು ಮರುತನೋಳ್ ||
ಪೊಂದಿಹ ಶೀತೋಷ್ಣಾದಿಗ |
ಳಂದದಿ ಬೊಮ್ಮದೊಳು ತೋರ್ಕುಮಾನಿತ್ಯತ್ವಂ || ೧೬೬ ||
ಕುಂಡಲಕಟಕಾದಿಗಳಾ |
ಮಂಡನದೋಳ್ ಸ್ವರ್ಣಭಾವದಿಂದಮದೆಂತು ||

ಪಿಂಡಿತನಿಜಭಾವದೊಳೊಡ ।
ಗೊಂಡಿಹವಂತೀಸನಾತನಬ್ರಹ್ಮವು ದಲ್ ॥ ೧೬೭ ॥

( ಗುರುಧ್ಯಾನದಿಂ ಗುರುತ್ವಂ )

ತಾನೆ ತಥಾವಿಧನಾಗಿಯೆ ।
ಏನೆಲ್ಲಿಯುಮಲ್ಲಿ ಬಿಡದೆ ನೆನೆಯುತ್ತಿರ್ಪಂ ॥
ಧ್ಯಾನದೆ ಕೀಟಂ ಭ್ರಮರವು ।
ತಾನಾಗುವತೆರದೆ ತತ್ಸ್ವರೂಪನೆನಿಪ್ಪಂ ॥ ೧೬೮ ॥

( ಗುರುಧ್ಯಾನದಿ ಪಿಂಡಪದವೆರಡರೋಳ್ ಮುಕ್ತತ್ವಂ )

ಗುರುಸಂಸ್ಮರಣೆಯ ಪೇರ್ಮೆಯೊ ।
ಳಿರೆ ತಾನೇ ಬ್ರಹ್ಮಮಯನೆನಿಪ್ಪಂ ನಿಚ್ಚಂ ॥
ಸುರುಚಿರಪಿಂಡದಿ ಪದದೊಳು ।
ವರರೂಪದಿ ಮುಕ್ತನಿವನು ಸಂದೆಯವಿಲ್ಲಂ ॥ ೧೬೯ ॥

( ಪಾರ್ವತಿಯು ನುಡಿದಳ್ )

ಜ್ಞಾನಿ ಮಹಾದೇವನೆ ಪೇಳ್ ।
ಏನಿದು ತಾಂ ಪಿಂಡಮೆಂತು ಪದಮೆಂತಕ್ಕುಂ ॥
ತಾನದು ರೂಪಾತೀತಂ ।
ಮಾನಿತತದ್ರೂಪಮೆಂತುಟಾದುದು ತಿಳಿಸೈ ॥ ೧೭೦ ॥

( ಶ್ರೀ ಮಹಾದೇವಂ ಪೇಳ್ದಂ ಪಿಂಡ ಮತ್ತು ಪದವಿನವರಣೆ )

ಪಿಂಡಿತಮೆನಿಪೀಪಿಂಡಂ ।
ಕುಂಡಲಿನೀಶಕ್ತಿ ಯುಹುದು ಪದಮಾಹಂಸಂ ॥
ಖಂಡಿತರೂಪಂ ಬಿಂದುವು ।
ಪಂಡಿತೆ [illegible] ನಿರಂಜನಮಿದು ತಾಂ ॥ ೧೭೧ ॥

( ಪಿಂಡಮುಕ್ತ ಪದಮುಕ್ತರು )

ಮುಕ್ತರ್ ತಾವ್ ಪಿಂಡದೊಳುಂ ।
ಮುಕ್ತರ್ ಪದದೊಳಗೆ ರೂಪದೊಳಗುಂ ಮುಕ್ತರ್ ॥
ಮುಕ್ತರೆ ರೂಪಾತೀತದಿ ।
ಮುಕ್ತರುಮೆಲ್ಲದರೊಳಿದಕೆ ಸಂದೆಯಮಿಲ್ಲಂ ॥ ೧೭೨ ॥

( ಗುರುಧ್ಯಾನದಿಂ ಪರಬ್ರಹ್ಮಮಯತೆ )

ನಿರುತಂ ಗುರುಭಜನರತಂ ।
ನೆರೆ ಕೀಟಭ್ರಮರದೋಲ್ ಪರಬ್ರಹ್ಮಮಯಂ ॥
ಇರುವನದಾವೆಡೆಯುಲ್ಲಿಯೆ ।
ವರಮುಕ್ತನೆನಿಪ್ಪನಿದಕೆ ಸಂದೆಯಮಿಲ್ಲಂ ॥ ೧೭೩ ॥

( ಭಗವಾನ್‌ಗುರು )

ಜ್ಞಾನಮದುಂ ವೈರಾಗ್ಯಂ ।
ತಾನಿವು ಮೈಶ್ವರ್ಯವೀರ್ಯಕೀರ್ತಿ ಶ್ರೀಗಳ್ ॥
ಮಾನಿತ ಷಡ್ಗುಣದೈಶ್ವ ।
ರ್ಯಾನುಗತಂ ಗುರುವೆ ಗೌರಿ ಭಗವಾನೆನಿಪಂ ॥ ೧೭೪ ॥

( ಗುರುವೆ ಶಿವಾದಿರೂಪಂ )

ಗುರುವೇ ಶಿವ ಗುರುವೆ ದೇವಂ ।
ಗುರುವೇ ತಾಂ ಬಂಧುವೆಲ್ಲನರರಿಗೆ ನಿಸದಂ ॥
ಗುರುವಾತ್ಮಂಗುರು ಜೀವಂ !
ಗುರುವಿಂ ಸಮಾಧಿಕನ್ಯನಿಲ್ಲಿಲ್ಲಿಯುಮುರ್ವಿಯೊಳ್ ॥ ೧೭೫ ॥

( ಗುರುದಯೆಯಿಂ ನಿಸ್ಸಂಗತ್ಯಂ )

ಗುರುವಿನ ದಯಾಕಟಾಕ್ಷಂ ।
ದೊರೆತಾಗಳ್ ಸರ್ವಸಂಗವರ್ಜಿತನೆನಿಕುಂ ॥
ನೆರೆ ನಿಸ್ಪೃಹನೇಕಾಕಿಯು ।
ಚಿರಶಾಂತಂ ತತ್ಪ್ರಸಾದಬಲದಿಂದಿರ್ಕುಂ ॥ ೧೭೬ ॥

( ಗುರುಬೋಧೆಯಿಲ್ಲದೆ ವೇದಾದಿವ್ಯರ್ಥತೆ )

ಸುಖಮಿಲ್ಲ ವೇದಶಾಸ್ತ್ರದಿ ।
ಸುಖಮಿಲ್ಲಂ ಮಂತ್ರಯಂತ್ರವಿದ್ಯೆಯೊಳನಿತುಂ ॥
ಸುಖಮೆಲ್ಲಿಯಿಲ್ಲ ಸದ್ಗುರು ।
ಮುಖದುಪದೇಶಪ್ರಸಾದದತ್ತಣಿನಿಳೆಯೊಳ್ ॥ ೧೭೭ ॥

( ಗುರುವಿನವಿನಾ ಸರ್ವಮತವ್ಯರ್ಥತೆ )

ಹತಚಾರ್ವಾಕದಿ ವೈಷ್ಣವ ।
ಮತದೊಳ್ ಪ್ರಾಭಾಕರಾಖ್ಯಮೀಮಾಂಸಕದೊಳ್ ॥
ಹಿತಮಿಲ್ಲಮಾವಮತದೊಳ್ ।
ಶ್ರುತಿ ಸಮ್ಮತಮಿದುವೆ ಗುರುವಿನಂಘ್ರಿನಿವಾಸಂ ॥ ೧೭೮ ॥

( ಗುರುಭಕ್ತನವಿನಾ ಸುಖವಿಲ್ಲ )

ಸುಖಮಿಲ್ಲದು ಸುರರಾಜಗೆ ।
ಸುಖಮಿಲ್ಲಂ ಚಕ್ರವರ್ತಿಗಳಿಗಂ ನಿಜದಿಂ ॥
ಸುಖಮೇಕಾಂತನಿವಾಸಿಗೆ ।
ಸುಖಮಿರ್ಪುದು ವೀತರಾಗ[illegible]ಮುನಿಗಂ ॥ ೧೭೯ ॥

( ಗುರುಭಕ್ತನ ಬ್ರಹ್ಮಾನಂದಕ್ಕೆಸಾಟಿಯಿಲ್ಲ )

ಆವಂತೃಪ್ತನದಾತ್ಮದೊ |
ಳಾವಂ ಚಿದ್ಬ್ರಹ್ಮಸುಖದ ರಸವಂ ಪೀರ್ವಂ ||
ದೇವೇಂದ್ರನ ಕೇಳಿಂಬಂ |
ಯಾವಂ ನರಪತಿಯು ಲಕ್ಷ್ಯಮಿಲ್ಲವನಿದಿರೊಳ್ || ೧೮೦ ||

( ಗುರುವಾಕ್ಯವಿನಾ ವನವಾಸವ್ಯರ್ಥತೆ )

ಒಂದೇ ದಲ್ ದ್ವಯಮಿಲ್ಲಂ |
ಎಂದೇ ಗುರುವಾಕ್ಯದಿಂದೆ ನಿಶ್ಚೈಸುತ್ತಂ ||
ಸಂದೇಹಬಿಟ್ಟು ಕಲಿವಗೆ |
ಚೆಂದೇನಿದೆ ಕಾನನಾಂತರದೊಳಾವಾಸಂ || ೧೮೧ ||

( ಗುರುಧ್ಯಾನ ಸಮಾಧಿಯಿಂ ಸರ್ವಪಾಪನಾಶ )

ನಿಮಿಷಾಭ್ಯಾಸದ ಬಲದಿಂ |
ಕ್ರಮದಿಂದ ಸಮಾಧಿಭಾವಮಾಂಪನದಾವಂ ||
ಅಮಿತಂ ತತ್‌ಕ್ಷಣದೊಳ್ ತಾಂ |
ಗಮಿಸುವುದಾಜನ್ಮಜನಿತದುರಿತವ್ರಾತಂ || ೧೮೨ ||

( ಅವ್ಯಕ್ತಾದಿರೂಪನಲ್ಲಿ ಆಹ್ವಾನಾದಿವ್ಯರ್ಥ )

ಅವ್ಯಕ್ತನೊಳಾಹ್ವಾನಂ |
ಸುವ್ಯಕ್ತವ್ಯಾಪಕನು ವಿಸರ್ಜನಮೆಂತುಂ ||
ದಿವ್ಯನಮೂರ್ತನೊಳರ್ಚನ |
ಮವ್ಯಯನೊಳ್ ಧ್ಯಾನಮೆಂತುಸಲಿಸುವನೆಸಗಂ || ೧೮೩ ||

( ತ್ರಿಮೂರ್ತಿರೂಪನಿಂ ತ್ರಿಕಾರ್ಯಗಳು )

ರಾಜಸದಿಂದಜನೆನಿಸುತೆ |
ತೈಜಸಸಾತ್ವಿಕದಿ ವಿಷ್ಣುವೆನಿಸುತೆ ಗುರುತಾಂ ||
ರಾಜಿಸುತೀಶಂ ತಮದಿಂ |
ಈಜಗವಂ ಸೃಜಿಸಿ ಪೊರೆದು ಲಯಿಸುವನನಿಶಂ || ೧೮೪ ||

( ಬ್ರಹ್ಮನಾಗಿಬ್ರಹ್ಮರೂಪ ಲಿಂಗಾವಲೋಕನ )

ಬ್ರಹ್ಮಮಯಂ ತಾನಾಗಿಯೆ |
ಬ್ರಹ್ಮವ ತತ್ಪರವ ಲಿಂಗವವಲೋಕಿಪುದೈ ||
ಬಹ್ಮ ಪರಾತ್ಪರತರಮಾ |
ಬ್ರಹ್ಮಕ್ಕೆಲ್ಲನ್ಯಮದು ನಿರಾಮಯ:ಮಖಿಲಂ || ೧೮೫ ||

( ಬ್ರಹ್ಮಜ್ಞನ ಆನಂದಲೀಲೆ )

ಶಾಂತಾತ್ಮಂ ನಿಸ್ಪೃಹನುಂ |
ಚಿಂತಾಸೂಯಾದಿದೂರನೇಕಾಂತಗತಂ ||
ಸಂತೋಷಬಾಲಲೀಲೆಯ |
ತಾಂ ತೋರ್ಪಮಹಾಂತಯೋಗಿ ಯಾಬ್ರಹ್ಮಜ್ಞಂ || ೧೮೬ ||

( ಯಥಾಲಾಭಸಂತುಷ್ಟಿ )

ದೊರೆತುದನುಂ ದೊರೆಯದುದಂ |
ಪರಮಾದರದೊಳನಲ್ಪವಾಗಲಿ ಯಲ್ಪಂ ||
ನೆರೆ ನಿಷ್ಕಾಮದಿ ಭೋಗಿಸು |
ತಿರೆ ಸಂತುಷ್ಟಮಾನಸಂ ಸಂಚರಿಸಂ || ೧೮೭ ||

( ಸರ್ವಜ್ಞಪದಸ್ಥಿತಿ )

ಸರ್ವಜ್ಞಪದ ಪಿದೆಂಬರ್ ।
ಸರ್ವಮಯಂ ತಾನೆ ಯೆನಿಸುತಂ ಚಿರಶಾಂತಂ ॥
ಉರ್ವಿಯೊಳೆಲ್ಲೆಡೆ ರಮಿಸುತೆ ।
ಪರ್ವಿದ ಚಿತ್ಪ್ರಭೆಯ ಸೂಸುವ ಸದಾನಂದಂ ॥ ೧೮೮ ॥

( ಗುರುವಸತಿಯೇ ಪುಣ್ಯಕ್ಷೇತ್ರಂ )

ಏನೆಲ್ಲಿಯು ನೆಲಸಿರ್ಪಂ ।
ತಾನಾದೇಶವದು ಪುಣ್ಯಭಾಜನವೆನಿಕುಂ ॥
ನಾನೀ ಮುಕ್ತನ ಲಕ್ಷಣ ।
ಮೇನಾನುಂ ಪೇಳ್ದೆ ದೇವಿ ತಿಳಿ ತಿಳಿಮನದಿಂ ॥ ೧೮೯ ॥

( ಗುರುಮಾರ್ಗದಿಂಮುಕ್ತಿ )

ಇದುಮುಪದೇಶಂ ದೇವಿಯೆ ।
ಅದೆ ಗುರುಮಾರ್ಗದೊಳೆ ಮುಕ್ತಿದಾಯಕಮೆನಿಕುಂ ॥
ವಿದಿತಂ ಸದ್ಗುರುಭಕ್ತಿಯು ।
ತುದಿಮೊದಲಿಂ ಧ್ಯಾಸಮಿದನು ಪೇಳ್ದೆಂ ನಿನಗಾಂ ॥ ೧೯೦ ॥

( ನಿಗಮಾಗಮಕರ್ತೃಗುರು )

ನಿತ್ಯವಿಮುಕ್ತಾತ್ರಯನುಂ ।
ಸತ್ಯಶ್ರುತಿಗಳ್ಗೆ ಕರ್ತನಖಿಳಾಗಮಕಂ ॥
ಸ್ತುತ್ಯಸ್ವಪರಜ್ಞಾನದ ।
ನತ್ಯಮಹೇಶ್ವರನ ಗುರುವರೇಣ್ಯನ ನಮಿಪೇಂ ॥ ೧೯೧ ॥

( ಸದ್ಗುರುವಿನಾವೇದಾದಿವ್ಯರ್ಥತೆ )

ನಿಗಮಾಗಮನಿವಹಂಗಳ ।
ನಗಣಿತಮಧ್ಯಾತ್ಮಶಾಸ್ತ್ರವೇದಾಂಗಗಳಂ ॥
ಮಿಗೆ ಯಭ್ಯಾಸವ ಮಾಳ್ಪೊಡ ।
ಮೊಗೆಯದು ಸದ್ಗುರುವನುಳಿದು ಶಿವೆ ಸುಜ್ಞಾನಂ ॥ ೧೯೨ ॥

( ನಿತ್ಯವಸ್ತುಸಾಕ್ಷಾತ್ಕಾರಗುರು )

ಸಂದೇಹಮೆಲ್ಲ ತೊಲಗಿಸಿ ।
ಒಂದಾಗಿಸಿ ನಿತ್ಯವಸ್ತು ಸಾಕ್ಷಾತ್ಕೃತಿಯಂ ॥
ಸಂದರ್ಶಿಪಂ ರಹಸ್ಯವ ।
ನೆಂದಾನಂದದೊಳು ನಮಿಪೆ ನೀಶ್ವರಗುರುವಂ ॥ ೧೯೩ ॥

( ಜ್ಞಾನಾರ್ಥಮನ್ಯಗುರ್ವಾಶ್ರಯಂ )

ಬಂಡುಣಿ ಬಂಡೊಳು ಲುಬ್ಧಂ ।
ಬಂಡರಸುತೆ ಪೂವಿನಿಂದೆ ಪೂವಂ ಪುಗುಗುಂ ॥
ಪಿಂಡಜ್ಞಾನದಿ ಲೋಭಂ ।
ಗೊಂಡಲೆಗುಂ ಗುರುವಿನಿಂದೆ ಗುರುವಂ ಶಿಷ್ಯಂ ॥ ೧೯೪ ॥

( ಜ್ಞಾನಹೀನಗುರುತ್ಯಾಗಂ )

ಜ್ಞಾನವಿಹೀನಂ ಮಿಥ್ಯಾ ।
ಜ್ಞಾನವ ಬೋಧಿಸುವ ಡಾಂಭಿಕಂ ಗುರುವೆಂತಾ ॥
ತಾನರಿಯನಾತ್ಮಶಾಂತಿಯ ।
ತೋರಿಸಂ ಪೆರರ್ಗೆ ಶಾಂತಿಯಂ ತ್ಯಜ್ಯನವಂ ॥ ೧೯೫ ॥

( ಜ್ಞಾನಹೀನಗುರು ಭಿನ್ನನೌಕೆಯಂತೆ )

ಅಱಿವಿಲ್ಲದಿರ್ಪ ಗುರುವಂ ।
ಚಿರದಿಂ ಪೊಂದಿದೊಡದೆಂತು ಮುಕುತಿಯ ಪಡೆವಂ ॥
ನೆರೆ ಬುಡವೊಡೆದಾ ಹಡಗದೊ ।
ಳಿರುವ ನರಂ ಕಡಲ ದಡವ ಪಡೆಯ ನದೆಂದುಂ ॥ ೧೯೭ ॥

( ಸಂಸಾರಮುಗ್ನಗುರುವು ತೇಲಿಸಧ ಶಿಲೆಯಂತೆ )

ಶಿಲೆಗಳ ಸಂಘವ ತೇಲಿಸಿ ।
ಸಲೆ ದಾಂಟಿಪ ಯುಕುತಿ ಶಿಲೆಗೆ ತಾನಿಲ್ಲೆಂತುಂ ॥
ಕೆಲವೊಜಿ ದಾಟಲಱಿಯಂ ।
ಪಲಬರ ನವನೆಂತು ಮಾಶ್ರಿತರ ದಾಂಟಿಸುವಂ ॥ ೧೯೭ ॥

( ನಿಂದ್ಯವಂದ್ಯ ಗುರುಗಳು )

ವೇಷದ ಸಂದರ್ಶನದಿಂ ।
ಭಾಷಣದಿಂ ಭ್ರಾಂತಿಗೊಳಿಪ ಗುರುಗಳವಂದ್ಯರ್ ॥
ದೋಷಿಗಳವರಂ ವರ್ಜಿಸಿ ।
ಪೋಷಿಸುವಾ ಧೀರಗುರುವನಾಶ್ರಿಸಲಕ್ಕುಂ ॥ ೧೯೮ ॥

( ಬಕವೃತ್ತಿಯ ಗುರುಗಳು )

ಪಾಪರತರ್ ನಾಸ್ತಿಕರುಂ ।
ಪಾಪಕೃತರ್ ಭೇದಮತಿಯ ಪಾಖಂಡಿಗಳುಂ ॥
ರೂಪಸ್ತ್ರೀಲಂಪಟರವ ।
ರಾ ಪರಮಕೃತಘ್ನರಱಿಯೆ ಬಕವೃತ್ತಿಯವರ್ ॥ ೧೯೯ ॥

( ಕುತರ್ಕಾದಿಗುರು )

ಕರ್ಮಭ್ರಷ್ಟರ್ ಶಠರುಮು ।
ಧರ್ಮರು ನಿಂದಿತಕುತರ್ಕವಾದದಿ ಚಂಡರ್ ॥
ದುರ್ಮನ ಹಿಂಸಕ ಕುಪಿತರ್ ।
ದುರ್ಮದಕಾಮಿಗಳು ಶಾಂತಿಹೀನರ್ ತ್ಯಾಜ್ಯರ್ ॥ ೨೦೦ ॥

( ದುರ್ವಿದಗ್ಧಾದಿಗುರು )

ಜ್ಞಾನಲವಲುಪ್ತರುಂ ಪ್ರಿಯೆ ।
ಮಾನಿತಕರ್ತವ್ಯಶೂನ್ಯರತಿಪಾಪರತರ್ ॥
ತಾನಚಲಭಕ್ತಿಯಿಂದಿರ ।
ಲೇಸಿಪರಿಂ ಬೇರೆ ಯೋಗ್ಯಗುರುವೆ ಸುಸೇವ್ಯಂ ॥ ೨೦೧ ॥

( ಯೋಗ್ಯಗುರುಭಕ್ತಿಯಿಂಸತ್ಫಲ )

ಪ್ರಿಯಶಿಷ್ಯನಿಂದೆ ಬೇರಿ ।
ಲ್ಲಿಯು ಪೇಳಲ್ಬಾರದಾವನೋರ್ವಗೆ ದೇವೀ ! ॥
ಪ್ರಿಯಫಲವಂ ಪೊಂದಲ್ ನಿ ।
ಶ್ಚಯದಿಂ ಭಕ್ತಿಯೆ ನರರ್ಗೆ ಕಾರಣಮೆನಿಕುಂ ॥ ೨೦೨ ॥

( ಪಂಚವಿಧ ಗುರುಗಳು )

ಏಕಾಂತವಾಸಗೂಢರ್ ।
ಲೋಕಾಂತದಿ ದೃಢಮನಸ್ಕ ರಾನಂದಮಯರ್ ॥
ಶ್ರೀಕಾಂತಚಿತ್ತಮೌನರ್ ।
ಬೇಕಂತೆಲ್ಲೆಡೆ ಚರಿಪ್ಪ ಪಂಚವಿಧಗುರುಗಳ್ ॥ ೨೦೩ ॥

( ಸದ್ಗುರುಸೇವಾರೀತಿ )

ಗುರುಮುಖದಿಂ ದೊರೆತಿರ್ಪುದು ।
ಮುರುಸಫಲಂ ಸಕಲಮದುವೆ ಪಾಪವಿನಾಶಂ ॥
ನೆರೆ ತನಗಾವಾವುದು ಹಿತ ।
ಕರಮಾವಸ್ತುವ ನವಂಚನೆಯೊಳೊಪ್ಪಿಸುಗುಂ ॥ ೨೦೪ ॥

( ಪಾದುಕೆ ಮುದ್ರೆ ಮಂತ್ರಗಳ ಗೋಪ್ಯ )

ಗುರುದೇವ ಸಮರ್ಪಿತಮಾ ।
ಗಿರಲಾನಾವಸ್ತುವಿಂದೆ ಸಂತಸವಡುವೇಂ ॥
ಗುರುದೇವನ ಪಾದುಕೆಯಂ ।
ವರಮುದ್ರೆಯ ಮೂಲಮಂತ್ರವಂ ಗೋಪಿಸುಗುಂ ॥ ೨೦೫ ॥

( ಮುಮುಕ್ಷುವಿನಶಾಂತಿ )

ನಮಿಪೆವು ನಿನ್ನ ಪದಾಬ್ಜವ ।
ಸುಮನೋಬುದ್ಧೀಂದ್ರಿಯಾದಿವಚನಗಳಿಂದಂ ॥
ಸಮಭಾವಮುಮುಕ್ಷುಗಳಿಂ ।
ದಮಿತಂ ಚಿಂತಿಪುದೆ ಕರ್ಮಮಯಶಾಂತಿಯು ದಲ್ ॥ ೨೦೬ ॥

( ಶಿವೆಗೆಶಿವಾನುಗ್ರಹವಾದಬಗ್ಯೆ ೪ ಪ್ರಮಾಣಗಳು )

ಆಗಿಹೆ ಸಾಧುವೆ ನಿನ್ನೋ ।
ಳೀಗಳ್ ನೆಲಸಿರ್ಪುದೆನ್ನ ಸದಯಕಟಾಕ್ಷಂ ॥
ಈಗಿದಕೆ ನಾಲ್ಪ್ರಮಾಣಂ ।
ಆಗಮ ಮೈತ್ರಿಹ್ಯ ಮನುಮಿತಿ ಪ್ರತ್ಯಕ್ಷಂ ॥ ೨೦೭ ॥
ಆವಗಮಾಸ್ವಾತ್ಮತೆಯಿಂ ।
ದೇವಿಯೆ ದೇಶಿಕನನಾವಮನುಜಂ ಭಜಿಪಂ ॥
ಆವುದು ಸಂಶಯಮಿಲ್ಲಂ ।
ತಾವು ನಿಜಂ ಭುಕ್ತಿಮುಕ್ತಿಯೆರಡುಂ ಪೊರ್ದೆಗುಂ ॥ ೨೦೮ ॥

ಇಂತೀ ಶ್ರೀ ಸ್ಕಾಂದ ಮಹಾಪುರಾಣ ದುತ್ತರಭಾಗದೋಳ್ ಶಿವಪಾರ್ವತೀ
ಸಂವಾದದೋಳ್ ಗುರುಗೀತಾ ಸ್ತೋತ್ರಂ ಭಕ್ತಿಜ್ಞಾನ ವೈರಾಗ್ಯವೆಂಬ
ಪ್ರಥಮಾಧ್ಯಾಯಂ ಸಮಾಪ್ತಂ.

॥ ಶ್ರೀಃ ಭದ್ರಂಶುಭಂ ಮಂಗಳಂ ॥

( ಶ್ರುತಿಸಾರ ಗುರುಗೀತೆ ) ಈಶ್ವರಂಪೇಳ್ದಂ.

ಇದರಿಂದ ಮಾವಕಾರ್ಯಮ |
ದೊದಗುವದದನೆಲ್ಲಪೇಳ್ವೆ ಕೇಳೌ ದೇವಿ ॥
ಇದು ಲೌಕಿಕವೆಂದೆಣಿಸದಿ |
ರಿದೆ ತಾಂ ಲೋಕೋಪಕಾರಕಂ ಶ್ರುತಿಸಾರಂ ॥ ೧ ॥

( ಸಕಾಮ ನಿಷ್ಕಾಮಕರ್ಮ ನಿರೂಪಣೆ )

ಜ್ಞಾನವಿಹೀನರ್ ಬಯಸುತೆ |
ಹೀನಕುಲೌಕಿಕದ ಕರ್ಮವಂ ಪೊಂದುವರಾ ॥
ಜ್ಞಾನಿಯು ಭಾವಿಸುತನಿಶಂ |
ಏನೆಲ್ಲಂ ಕರ್ಮಮಾಳ್ಪ ನದೆ ನಿಷ್ಕರ್ಮಂ ॥ ೨ ॥
ಲೌಕಿಕಧರ್ಮವ ಪೊಂದಲ್ |
ತಾ ಕಡೆಯಿಲ್ಲದ ಭವಾಂಬುನಿಧಿಯೋಳ್ ಬೀಳ್ವಂ ॥
ಆಕರ್ಮವೆಲ್ಲವಜ್ಞಾ |
ನಾಕುಲಿತಂ ಶಾಂತಿ ನೀಡುವುದು ನಿಷ್ಕರ್ಮಂ ॥ ೩ ॥

( ಗುರುಗೀತಾ ಪಠನ ಫಲಂ ) ( ಪಠನ ಶ್ರವಣ ಲೇಖನಾದಿಗಳು )

ಇದನೇ ಭಕ್ತಿಸುಭಾವದಿ |
ಮುದದಿಂ ದಿನದಿನದಿ ಪಠಿಸುಗುಂ ಕೇಳ್ವಂ ತಾಂ ॥

ತುದಿಮೊದಲಿಂ ಬರೆಯುತ್ತಂ ।
ಪದೆದೀವುದು ಬುಧರ್ಗೆ ದಾನವಂ ದಕ್ಷಿಣೆಯಿಂ ॥ ೪ ॥

ದೇವಿ ಗುರುಗೀತೆಯಿದ ನೀಂ ।
ಭಾವಿಸು ಹೃದಯದೊಳು ಬಿಡದೆ ನಿತ್ಯಂ ಮುದದಿಂ ॥
ಆವಮಹಾವ್ಯಾಧಿಗಳಿಂ ।
ತೀವಿದ ದುಃಖಂಗಳಲ್ಲಿ ಜಪಿಸುವುದನಿಶಂ ॥ ೫ ॥

( ಗೀತೆಯ ಪ್ರತಿವರ್ಣವೂ ಮಂತ್ರರಾಜವು )

ಗುರುಗೀತೆಯೊಳೇಕೈಕಾ ।
ಕ್ಷರಮಿದು ಶಿವೆ ಮಂತ್ರರಾಜಮೆನಿಕುಂ ನಿಸದಂ ॥
ಪೆರತುಂ ವಿಧವಿಧಮಂತ್ರಗ ।
ಳುರೆ ಷೋಡಶಕಲೆಯೊಳೊಂದಕಂ ಸಮವಲ್ಲಂ ॥ ೬ ॥

( ಗುರುಗೀತಾ ಪಾರಾಯಣ ಫಲಂ )

ಪೊಂದುವನನಂತಫಲವಂ ।
ಸುಂದರಗುರುಗೀತೆಯಮಳಜಪವಿಧಿಯಿಂದಂ ॥
ಕುಂದುವುದೆಲ್ಲಾ ದುರಿತಂ ।
ಪೊಂದಿದ ದಾರಿದ್ರ್ಯಮೆಲ್ಲಮಪ್ಪುದು ನಾಶಂ ॥ ೭ ॥

ಇದು ಕಾಲಮೃತ್ಯುಭಯಹರ ।
ಮಿದು ಸಂಕಟಮೆಲ್ಲವಂ ನಿವಾರಿಪುದು ನಿಜಂ ॥
ಇದು ರಾಕ್ಷಸಭೂತಂಗಳ ।
ಮದಿತ ವ್ಯಾಘ್ರಾದಿಚೋರಭಯವಂ ಕಳೆಗುಂ ॥ ೮ ॥

ಕುಷ್ಠ ಪ್ರಮುಖೋಪದ್ರವ ।
ದುಷ್ಟ ಮಹಾದೋಷಗಳ ನಿವಾರಿಸಿ ಪೊರೆಗುಂ ॥

ಇಷ್ಟದ ಗುರುಸಾನ್ನಿಧ್ಯದೊ ।
ಳಿಷ್ಟು ಫಲಂ ಪಠನದಿಂದಮಾಫಲ ದೊರೆಗುಂ ॥ ೯ ॥

ಇದುವೆ ಮಹಾವ್ಯಾಧಿಹರಂ ।
ವಿದಿತಾಷ್ಟವಿಭೂತಿಗಳ ಸುಸಿದ್ಧಿಯಕೊಡುಗುಂ ॥
ಅದು ಮೋಹನದೋಳ್ ವಶ್ಯದೊ ।
ಳಿದುವೆ ಸದಾ ತಾನೆ ಜಪಿಸಲಕ್ಕುಂ ಸಫಲಂ ॥ ೧೦ ॥

[ ದರ್ಭಾದ್ಯಾಸನ ಫಲ ]

ಪಾವನದರ್ಭೆಯ ಗರುಕೆಯ ।
ಸೇವಿತಬಿಳಿಗಂಬಳಿಯ ಶುಭಾಸನದೋಳ್ ತಾಂ ॥
ದೇವಿಯೆ ಕೂಡುತ್ತಂ ನಿಜ ।
ಭಾವದೊಳೇಕಾಗ್ರಮನದಿ ಜಪಿಸುಗುಮನಿಶಂ ॥ ೧೧ ॥

[ ಶಾಂತ್ಯಾದಿಗಳಲ್ಲಿ ಬೇರೆಬಣ್ಣದಾಸನಗಳು ]

ಬಿಳಿದಾಸನ ಶಾಂತ್ಯರ್ಥಂ ।
ಬಳಿಕಂ ವಶ್ಯದೊಳು ರಕ್ತವರ್ಣಾಸನವುಂ ॥
ತಿಳಿ ಯಭಿಚಾರದಿ ನೀಲಂ ।
ಹಳದಿಯದಾಸನವು ಹಣದ ಸಂಪಾದನೆಯೋಳ್ ॥ ೧೨ ॥

[ ರೋಗದಾಯಕಾದಿ ದುಷ್ಟಾಸನಗಳು ]

ಬಡತನ ವಸ್ತ್ರಾಸನದೋಳ್ ।
ಜಡಪಾಷಾಣಾಸನದೊಳು ರೋಗೋದ್ಭವಮುಂ ॥
ಕಡುದುಃಖಂ ನೆಲದಾಸನ ।
ದೊಡನಾ ಕಾಷ್ಠಾಸನದೊಳು ನಿಷ್ಫಲವುಕ್ಕುಂ ॥ ೧೩ ॥

[ ವ್ಯಾಘ್ರಚರ್ಮಾಸನಾದಿ ಫಲ ]

ಪುಲಿದೊಗಲೊಳ್ ಮೋಕ್ಷದ ಸಿರಿ |
ಸಲೆ ಕೃಷ್ಣಾಜಿನದಿ ಸಿದ್ಧಿಸುಗುಮಾಜ್ಞಾನಂ ||
ಫಲಿಕುಂ ಜ್ಞಾನಂ ಕುಶದೊಳ್ |
ಪಲಸಿದ್ಧಿಗಳಕ್ಕು ಕಂಬಳಾಸನದೊಳ್ ತಾಂ || ೧೪ ||

( ಮೋಹನವಶೀಕರಣಾದಿ ಸಿದ್ಧಿ )

ಆಕರ್ಷಣ ಮಾಗ್ನೇಯದಿ |
ಭೀಕರವೈರಿಗಳ ನಾಶ ವಾಯುವ್ಯದಿ ತಾಂ ||
ಲೋಕದಿ ದರ್ಶನ ಸಿರುತಿಯೊ |
ಳೇಕ ಪರಜ್ಞಾನ ಮದುವೆ ಯೀಶಾನ್ಯದೊಳುಂ || ೧೫ ||
ಉತ್ತರದಿಶೆಯೊಳ್ ಶಾಂತಿನಿ |
ಮಿತ್ತದಿ ಜಪಿಸುವುದು ವಶ್ಯದೊಳ್ ಪೂರ್ವಮುಖಂ ||
ಮತ್ತದು ದಕ್ಷಿಣದಿಶೆಯೋ |
ಳುತ್ತಮ ಮಾಪಶ್ಚಿಮದಿ ಧನಾಗಮಮಕ್ಕುಂ || ೧೬ ||
ಪಲಜೀವಿಗಳ್ಗೆ ಮೋಹದ |
ಸಲೆ ಬಂಧನ ಬಿಡಿಸಿ ಪರಮಮೋಕ್ಷವನೀಗುಂ ||
ಒಲುಮೆಯಿಂದು ದೇವರಾಜಗೆ |
ಫಲವೀಯುತೆ ಸರ್ವಲೋಕವಶಕರಮೆನಿಕುಂ || ೧೭ ||
ಹಗೆಗಳ ವಾಕ್‌ಸ್ತಂಭನಕರ |
ಮೊಗೆವಾದುಷ್ಕರ್ಮರಾಶಿಯುಂ ನಾಶಿಸುಗುಂ ||
ಸ್ವಗುಣಗಳಂ ಪೆರ್ಚಿಸುತಂ |
ಮಿಗೆ ಸತ್ಕರ್ಮಗಳ ಸಿದ್ಧಿಗೊಳಿಪುದು ಬೇಗಂ || ೧೮ ||

( ದುಸ್ವಪ್ನಾದಿನಾಶ )

ದುಸ್ವಪ್ನ ಮೆಲ್ಲಮಳಿಗುಂ |
ಸುಸ್ವಪ್ನಗಳೆಲ್ಲ ಫಲಿಕು ಮಸದಳಕಜ್ಜಂ ||

ಭಾಸ್ವರಮೆನೆ ಸಿದ್ಧಿಸುಗುಂ ।
ತಾ ಸ್ವಯದಿಂ ಕಳೆವುದಾ ನವಗ್ರಹಭಯವಂ ॥ ೧೯ ॥

( ಬಾಲಗ್ರಹ ನಿವಾರಣೆ ಸಂತಾನಪ್ರಾಪ್ತಿ )

ಸರ್ವವ್ಯಾಧಿಗಳಳಿವವು ।
ಸೇರ್ವವು ಬಾಲಗ್ರಹಾದಿಭಯಗಳ್ ದೂರಂ ॥
ಸರ್ವಸುಶಾಂತಿಕರಂ ತಾ ।
ನುರ್ವರೆಯೊಳ್ ಬಂಜೆ ಪುತ್ರವತಿ ಯಪ್ಪಳು ದಲ್ ॥ ೨೦ ॥

( ಸೌಮಾಂಗಲ್ಯಾದಿಫಲಂ )

ಸತಿಗಂ ಸೌಮಾಂಗಲ್ಯಮು ।
ದತಿಶಯದಿಂ ವರ್ಧಿಸುವುದು ಸೌಭಾಗ್ಯಚಯಂ ॥
ಧೃತಿಯಾಯುಷ ಮಾರೋಗ್ಯಂ ।
ಚ್ಯುತಿಯಿಲ್ಲದೆ ಪುತ್ರಪೌತ್ರವಂಶಂ ಬಳೆಗುಂ ॥ ೨೧ ॥

( ನಿಷ್ಕಾಮ ಜಪದಿಂಮೋಕ್ಷ )

ಜಪಿಸಲ್ ನಿಷ್ಕಾಮದಿ ತಾಂ ।
ಸುಪಠನದಿಂ ವಿಧವೆ ಮೋಕ್ಷವಂ ಪೊಂದುವಳಾ ॥
ಜಪಿಸಲ್ ಸಕಾಮದಿಂ ಸ್ಥಿರ ।
ಮಪರಸುಜನ್ಮದೊಳಗಹುದು ಸೌಮಾಂಗಲ್ಯಂ ॥ ೨೨ ॥

( ಸರ್ವಾರ್ಥಸಿದ್ಧಿ )

ಭಯದುಃಖವಿಘ್ನ ವೆಲ್ಲವ ।
ಲಯಗೊಳಿಪುದು ಶಾಪತಾಪವಂ ಪರಿಹರಿಕುಂ ॥

ರಯದಿಂ ಪಾಪವ ಕಳೆಗುಂ |
ಜಯದಂ ಧರ್ಮಾರ್ಥಕಾಮಮೋಕ್ಷವಂ ಕೊಡುಗುಂ || ೩೩ ||

( ಕಾಮಧೇನ್ವಾದಿಸಮಫಲಂ )

ರಾಗದೊಳಾವುದು ಕಾಮಿತ |
ಭೋಗಳದೆಲ್ಲವನು ಬಿಡದೆ ಬೇಗಂ ಪಡೆವಂ ||
ಈ ಗುರುಗೀತಾಫಲವಂ |
ನೀಗದು ಪೇಳಲ್ಕೆ ದೇವಿಯುಸದಳಮೆನಗಂ || ೩೪ ||

ಕಾಮಿತಕೆ ಕಾಮಧೇನುವು |
ಪ್ರೇಮದ ಕಲ್ಪಿತಕೆ ಕಲ್ಪವೃಕ್ಷಂ ನಿಜದಿಂ ||
ಈಮಹಿಯ ಚಿಂತಿತಕ್ಕಂ |
ಆಮಹಚಿಂತಾಮಣಿಯಿದು ಜಯಮಂಗಳದಂ || ೩೫ ||

( ಲೇಖನ ಅರ್ಚನಾದಿ ಫಲಂ )

ಬರೆದಿದನಾವಂ ಪೂಜಿಪ |
ನುರೆ ತಾಂ ಸನ್ಮೋಕ್ಷಸಂಪದವನವ ಪಡೆವಂ ||
ಗುರುಭಕ್ತಿಯುಂ ವಿಶೇಷದಿ |
ಭರದಿಂ ಹೃದಯದೊಳು ಜನಿಸಿ ನಿಲ್ಗುಂ ಸತತಂ || ೩೬ ||

( ಸರ್ವಮತೀಯರಿಗೆ ಜಪಾರ್ಹಂ )

ಸೌರರ್ ಶಾಕ್ತರ್ ಶೈವರ್ |
ಸಾರುತೆ ವೈಷ್ಣವರು ನುತಿಪ ಗಾಣಾಪತ್ಯರ್ ||
ಧೀರರ್ ಪಾಶುಪತಾದಿಗ |
ಳೋರಣದಿಂ ಜಪಿಪರೆಲ್ಲಮಿಲ್ ಶಂಕೆಯು ದಲ್ || ೩೭ ||

( ಸರ್ವಜ್ಞತಾದಿಸಿದ್ಧಿ )

ಸರ್ವಜ್ಞತಾದಿಸಿದ್ಧಿಯು ।
ಸರ್ವಮಹಾಸಿದ್ಧಿಚಯವು ಪಠನದಿ ದೊರೆಗುಂ ॥
ಸಾರ್ವನು ನಾಲ್ದೆರ ಮುಕುತಿಯ ।
ಸುರ್ವಿಯೊಳುರೆಯೋಗಿರಾಜನೆನಿಸುತೆ ಮೆರೆವಂ ॥ ೨೮ ॥

( ಶಿವಸ್ವರೂಪತಾಸಿದ್ಧಿ )

ತಾನೆ ಸದಾಶಿವನೆನಿಸುವ ।
ನೇನಿದರೋಳ್ ಶಂಕೆಯಿಲ್ಲ ಸತ್ಯಂ ಸತ್ಯಂ ॥
ಧ್ಯಾನಸುಗವ್ಯ ಪರಾತ್ಪರ ।
ಮೇನೆನಿಕು ಮದಕ್ಕು ಸರ್ವಸಾಮಾನ್ಯಂ ತಾಂ ॥ ೨೯ ॥

( ಜಪೋಚಿತಸ್ಥಳಗಳು )

ಈಗಳ್ ದೇವಿಯೆ ಪೇಳ್ವೆಂ ।
ರಾಗದೊಳಾಂ ರಪ್ಯಕಾಮ್ಯಜಪದಾ ಸ್ಥಳವಂ ॥
ಸಾಗರದ ನದಿಯ ತೀರದಿ ।
ಮೇಗದು ತೀರ್ಥದೊಳು ಹರಿಹರಾಲಯದೊಳಗುಂ ॥ ೩೦ ॥

ದೇವಿಯ ದೇವಾಲಯದೋಳ್ ।
ಪಾವನಗೋಷ್ಠದಿ ಸಮಸ್ತದೇವಾಲಯದೋಳ್ ॥
ಆವಟಧಾತ್ರಿಯ ಮೂಲದಿ ।
ತೀವಿದ ವೃಂದಾವನದೊಳು ಸದ್ಗುರುಮಠದೋಳ್ ॥ ೩೧ ॥

ಜಪದ ಮಹಾನುಷ್ಠಾನದಿ ।
ತಪದಿಂದಂ ಮೌನದಿಂದೆ ನಿರ್ವೇದನದಿಂ ॥

ಸುಪವಿತ್ರವಿಮಲದೇಶದಿ ।
ಜಪವಂ ಸ್ತೋತ್ರವ ಸಮಾಚರಿಪುದಾಶಿಷ್ಯಂ ॥ ೩೨ ॥

ವಿಜಯುವ ಪಡೆಸಂ ಜಪದಿಃ ।
ನಿಜದಿಂ ಜಯುಸಿದ್ಧಿಸಿಚಯುವಂ ಶುಭಫಲಮಂ ॥
ತ್ಯಜಿಕುಂ ಹೀನಕುಕರ್ಮವ ।
ಭಜಕಂ ತಾಂ ಗರ್ಹಿತಪ್ರದೇಶವನೆಲ್ಲಂ ॥ ೩೩ ॥

ಖ್ಯಾತವಟಮೂಲದೊಳು ವನ ।
ದಾ ತಳದೋಳೀ ಸ್ಮಶಾನಭಯಭೂಮಿಯೊಳುಂ ॥
ಚೂತತರುಸನ್ನಿಧಿಯೊಳುಂ ।
ಪೂತಸು ಧತ್ತೂರಮೂಲದೊಳು ಸಿದ್ಧಿಸುಗುಂ ॥ ೩೪ ॥

( ಪೀಠಾಸನಾದಿ ಸಂದರ್ಭಂ )

ಹಳದಿಯು ಮೋಹನಕರ್ಮದಿ ।
ತಿಳಿ ನೀಲಾಸನವು ಮಾಭಿಚಾರಿಕಕೃತಿಯೋಳ್ ॥
ಬಿಳಿಯಾಸನ ವದುಶಾಂತಿಯೊ ।
ಳುಳಿದೆಡೆ ರಕ್ತಾಸನವದು ವಶ್ಯಾದಿಕಮೋಳ್ ॥ ೩೫ ॥

( ಕುಕ್ಕುಟಾಸನಾದಿ ಸಂದರ್ಭಂ )

ಕುಕ್ಕುಟಮುಖಹೀನಾಸನ ।
ಮಕ್ಕುಮದುಂ ಹೀನಕರ್ಮ ಹೀನಫಲಂ ತಾಂ ॥
ತಕ್ಕುದು ಪದ್ಮಾದ್ಯಾಸನ ।
ಮಕ್ಕುಮದುತ್ತಮ ಸುಕರ್ಮ ಸುಫಲವನೀಗುಂ ॥ ೩೬ ॥

( ಗುರುಗೀತಾಪಠನ ಸಂದರ್ಭಂ

ಗುರುಗೀತೆಯಂ ಪ್ರಯಾಣದೊ ।
ಳರಿಸಂಕಟದೋಳಸಾಧ್ಯಸಂಗ್ರಾಮದೊಳುಂ ॥

ಸ್ಮರಿಸಲ್ ಜಯವಂ ಪಡೆವಂ |
ಮರಣದಿ ನಿಜಮೋಕ್ಷಪದವಿಯಂ ತಾಂ ಪಡೆವಂ || ೪೭ ||

( ಗುರುಮಂತ್ರಫಲಂ )

ಗುರುಮಂತ್ರದಿಂದೆ ನಿಶ್ಚಿತ |
ಮುರೆಸಿದ್ಧಿಪವೆಲ್ಲಕರ್ಮನಿಯಮವ್ರತಗಳ್ ||
ಗುರುಮಂತ್ರವಿರಲು ಮೊಗದೊಳು |
ಭರದಿಂ ಸಿದ್ಧಿಪುದವಂಗೆ ಬೇರೊಂದಿಲ್ಲಂ || ೪೮ ||

( ಗುರುದೀಕ್ಷಾಫಲಂ )

ಕರ್ಮಗಳೆಲ್ಲವು ಸಿದ್ಧಿಪು |
ಮೊರ್ಮೆಯೆ ಗುರುದೀಕ್ಷೆಯ ಪ್ರಭಾವದೊಳಮಿತಂ ||
ನಿರ್ಮಲಮಪ್ಪುದು ಭವದು |
ಷ್ಕರ್ಮದ ಮಲನಾಶಮಷ್ಟಪಾಶಚ್ಛೇದಂ || ೪೯ ||

( ಗುರುಗೀತಾತೀರ್ಥಸ್ನಾನಫಲಂ )

ಗುರುಗೀತೆಯೆಂಬತೀರ್ಥದಿ |
ಪರತತ್ವಜ್ಞಾನಿ ಜಳಕಮಾಳ್ಪಂ ಸತತಂ ||
ಗುರುವವನೇ ತಾಂ ಸಾಕ್ಷಾತ್ |
ಪರಮಬ್ರಹ್ಮಜ್ಞನವನೆ ಸದಸದ್ವಿದನುಂ || ೫೦ ||

( ಗುರುಭಕ್ತ ವಸತಿ ಮಹಿಮೆ )

ಉರ್ವಿಯೊಳಾವೆಡೆ ನಿಲ್ವಂ |
ಸರ್ವವಿಶುದ್ಧಂ ಪುನೀತನೀತಂ ನಿಜದಿಂ ||
ಸಾರ್ವರ್ ದೇವಗಣಂಗಳ್ |
ಸರ್ವರ್ ಸುಕ್ಷೇತ್ರಪೀಠಮೆನುತಂ ಚರಿಪರ್ || ೫೧ ||

( ಗುರುಗೀತಾಪಾಠಕ ದರ್ಶನ ಫಲಂ )

ಕುಳಿತಿರೆ ಮಲಗಿರೆ ನಿಂತಿರ ।
ಲಿಳೆಯೋಳ್ ನಡೆವಾಗ ಕುದುರೆಯೇರ್ಿರ್ಪೆಡೆಯೋಳ್ ॥
ತಿಳಿಯಲದಾನೆಯ ನೇರಿರೆ ।
ಗಳಿಲನೆ ಜಾಗ್ರದಿ ಸುಷುಪ್ತಿಯೋಳ್ ಸ್ವಪ್ನದೊಳುಂ ॥ ೪೨ ॥

ತಿಳಿವಿಂದಂ ತಿಳಿ ಮನದಿಂ ।
ದಿಳೆಯೋಳ್ ಗುರುಃಗೀತೆಯಿದನು ಜಪಿಪನದಾವಂ ॥
ತಳೆದವನ ನೋಟವಮಾತ್ರದಿ ।
ತಿಳಿಯೆ ಪುನರ್ಜನ್ಮವಿಲ್ಲಮವನಿಗದೆಂದುಂ ॥ ೪೩ ॥

( ಗುರುಭಕ್ತನ ಶಿವಜೀವ ಸಾಮರಸ್ಯಂ )

ಆನೀರದು ಸಾಗರದೋಳ್ ।
ತಾನಾಪಾಲೊಳಗೆ ಪಾಲು ನೀರೋಳ್ ನೀರುಂ ॥
ಬಾನಾಗಳೊಡೆದ ಕೊಡಪೋಳ್ ।
ತಾನಪ್ಪೋಲಾತ್ಮ ನಾಪರಾತ್ಮನೊಳಪ್ಪಂ ॥ ೪೪ ॥

ಅಂತೆಯೆ ಸುಜ್ಞಾನಿಯು ತಾಂ ।
ಸಂತತ ಜೀವಾತ್ಮನವುಳಪರಮಾತ್ಮನೊಳುಂ ॥
ಸಂತಸದಿ ರಮಿಪನೈಕ್ಯದಿ ।
ಸಂತನವಂ ಜ್ಞಾನಿಯೆಲ್ಲೆಡೆಯೊಳನವರತಂ ॥ ೪೫ ॥

ಈವಿಧದಿ ಮಹಾಮುಃಕ್ತ ।
ನದಾವಗವೆಲ್ಲೆಡೆಯು ಬಿಡದೆ ವರ್ತಿಸುತಿರ್ಪಂ ॥
ಏವಿಧದೊಳುಂ ಪ್ರಯತ್ನದಿ ।
ಪಾವನ ಗುರುಭಕ್ತಿಯಂ ಸಮಾಚರಿಪುದು ತಾಂ ॥ ೪೬ ॥

( ಗುರುಸಂತುಷ್ಟಿಯಿಂ ಫಲಂ :

ಗುರುವಂ ಸಂತಸಗೊಳಿಸಲ್ ।
ನರನವ ತಾಂ ಮುಕ್ತನೆನಿಪನಾತನ ದಯದಿಂ ॥
ದೊರೆಕೊಳ್ವುದು ಭೋಕ್ತೃತ್ವಂ ।
ಚಿರವಣಿಮಾದ್ಯಷ್ಟಸಿದ್ಧಿಚಯದೋಳ್ ಗಿರಿಜೇ ॥ ೪೭ ॥

( ಗುರುಭಕ್ತ ಸಮತಾಭಾವನೆ )

ಸಮತಾಭಾವದೊಳೀವಿಧ ।
ರಮಿಸುವನೀಜ್ಞಾನಿ ಬಿಡದೆ ಯಿರುಳುಂ ಪಗಲುಂ ॥
ಅಮಿತಮಹಾಮಪೌನಿಯು ತಾಂ ।
ಕ್ರಮದಿಂ ತ್ರೈಲೋಕ್ಯಸಮತೆಯಂ ಸಲೆ ಪಡೆವಂ ॥ ೪೮ ॥

( ಗುರುಭಕ್ತನ ಸದೇಹ ಕೈವಲ್ಯಂ )

ನೆಲದೋಳ್ ಶರೀರದೊಡನೆಯೆ ।
ಸಲೆ ಜೀವನ್ಮುಕ್ತನೆನಿಪನಿವ ಗುರುಭಕ್ತಂ ॥
ಸುಲಭಂ ಭುಕ್ತಿಯು ಮುಕ್ತಿಯು ।
ನೆಲಸುವುದು ಸುವಾಣಿಯದುವೆ ನಾಲಿಗೆದುದಿಯೋಳ್ ॥ ೪೯ ॥

( ಗುರುಗೀತೆ ಮತ್ತು ಗುರುಮಹಿಮೆ )

ಗುರುಗೀತೆಯ ಜಪದಿಂದಂ ।
ಚಿರಸಂಸಾರಿಗಳೆನಿಪ್ಪ ನರರೆಲ್ಲರ್ ತಾಂ ॥
ವರಕಾಮಿತಗಳನೆಲ್ಲವ ।
ನಿರುತಂ ಪಡೆವರ್ ತ್ರಿಸತ್ಯಮೆನ್ನಯ ವಚನಂ ॥ ೫೦ ॥

ಸತ್ಯಂ ಸತ್ಯಂ ಮತ್ತದು ।
ಸತ್ಯಂ ನಾಂ ಪೇಳ್ದ ಧರ್ಮಶಾಸ್ತ್ರಮದೆಲ್ಲಂ ॥
ನಿತ್ಯಂ ಗುರುಗೀತಾಸಮ ।
ಮತ್ಯಂತಸ್ತೋತ್ರಮಿಲ್ಲ ಗುರುವಿಂದೆ ಪರಂ ॥ ೫೧ ॥

ಗುರು ದೇವನು ಗುರುವೆ ಧರ್ಮವು ।
ಗುರುವೇ ನಿಷ್ಠೆಯು ಗರಿಷ್ಠತಪವುಂ ಜಪವುಂ ॥
ಗುರುವಿಂ ಪರತರಮಿಲ್ಲಿದ ।
ನೊರೆವೆ ನಾಂ ನಿನಗೆ ಮೂರುಸಲದೊಳ್ ಗಿರಿಜೇ ॥ ೫೨ ॥

( ಗುರುಭಕ್ತನ ವಂಶಾದಿಧನ್ಯತೆ )

ಧನ್ಯಳು ಮಾತೆಯು ಪಿತನುಂ ।
ಧನ್ಯನು ಕುಲಗೋತ್ರಮದುವೆ ಧನ್ಯಮೆನಿಕ್ಕುಂ ॥
ಧನ್ಯಳು ಭೂದೇವಿಯು ಸ ।
ನ್ಮಾನ್ಯನೊಳಾವನೊಳು ನೆಲಸಿ ಗುರುಭಕ್ತಿಯಿರಲ್ ॥ ೫೩ ॥

( ಗುರುತೋಷದಿಂಕೋಟಿಜನ್ಮಕರ್ಮಾದಿ ಸಫಲತೆ )

ವ್ರತಯಜ್ಞಕರ್ಮತಪಗಳ್ ।
ಗತಮಾಕಲ್ಪಾಂತಜನ್ಮಕೋಟಿಗಳೊಳ್ ಸಂ ॥
ಗತಮೆಲ್ಲವು ಸಫಲಂಗಳ್ ।
ಕೃತಗುರುಸಂತೋಷಮಾತ್ರದಿಂದಂ ದೇವೀ ॥ ೫೪ ॥

( ಗುರುಭಕ್ತನ ಶರೀರಾದಿ ಸಾರ್ಥಕತೆ )

ಗುರು ಪರವೆಂದು ಸ್ಮರಿಪನ ।
ಚರಿಪಿಂದ್ರಿಯ ಮರ್ಥಮುಂ ಶರೀರಂ ಪ್ರಾಣಂ ॥

ಮೆರೆವಾಸ್ವಬಂಧುಜನವುಂ ।
ಧರೆಯೊಳ್ ಪಿತೃವಂಶ ಮಾತೃವಂಶಂ ಧನ್ಯಂ ॥ ೫೫ ॥

( ಗುರುಸೇವಾಪರಾಙ್ಮುಖರದುರ್ಗತಿ )

ಭಾಗ್ಯವಿಹೀನರಶಕ್ತರ ।
ಯೋಗ್ಯಜನರ್ ಸಮ್ಮತಿಸರು ಗುರುಸೇವೆಯು ಸೌ ॥
ಭಾಗ್ಯಗುರುಸೇವೆಗೊಪ್ಪದೆ ।
ಭೋಗ್ಯರು ತಾವೆನಿಪ ರಶುಚಿನರಕದಿನುಚಿರಂ ॥ ೫೬ ॥

( ಗುರುದಯೆಯುಲ್ಲದನ ದುರ್ಗತಿ )

ಯಾರಿಗೆ ಗುರುಕೃಪೆಯಿಲ್ಲವೊ ।
ಹೇರಳಧನ ಭಾಗ್ಯ ಬಲಸುವಿದ್ಯೆಗಳೆಲ್ಲಂ ॥
ಭೂರಿನಿರರ್ಥಕವೆನಿಸವು ।
ಘೋರದಿ ನರಕದೊಳು ಬೀಳ್ವರಿಂದು ನಿಜ ಗಿರಿಜೇ ॥ ೫೭ ॥

( ತ್ರಿಮೂರ್ತ್ಯಾದಿಗಳು ಗುರುಭಕ್ತರು )

ಅಜಹರಿಹರರುಂ ಸುರರುಂ ।
ಸುಜನರ್ ಮುನಿಜನರು ಯಕ್ಷಚಾರಣಸಿದ್ಧರ್ ॥
ನಿಜದಿಂ ಪಿತೃಕಿನ್ನರರುಂ ।
ಭಜಿಪರ್ ಶ್ರೀಗುರುವರೇಣ್ಯಪಾದಾಂಬುಜವಂ ॥ ೫೮ ॥

( ಗುರುಪಾದವೆ ಪುಣ್ಯತೀರ್ಥಂ )

ಗುರುಭಾವವೆ ಪರತೀರ್ಥವು ।
ಪೆರತಾತೀರ್ಥಂಗಳೆಲ್ಲ ನಿರರ್ಥಕವೆನಿಕುಂ ॥

ನೆರೆ ಸರ್ವತೀರ್ಥವುಯುವದು ।
ಧರೆಯೋಳ್ ಶ್ರೀಗುರುವರೇಣ್ಯಚರಣಾಂಭೋಜಂ ॥ ೫೯ ॥

( ಗೀತಾಪರಾಙ್ಮುಖರ ಅವಸ್ಥೆ )

ಮಂದರ್ ವೇಶ್ಯಾಭೋಗಾ ।
ನಂದರ್ ನಿಜಕಾಂತೆಯೋಳ್ ಪರಾಙ್ಮುಖರಪ್ಪರ್ ॥
ಚೆಂದವುದಲ್ಲದು ದೇವಿಯೆ ।
ಇಂದಿದನಿನಗಾನು ಪೇಳ್ದೆ ಸದರಿಂ ಪ್ರಿಯಳೇ ॥ ೬೦ ॥

( ಗೀತೆಯು ರಹಸ್ಯಕೆ ರಹಸ್ಯಂ )

ಗೋಪ್ಯಮಿದು ಪೇಳಲಾಗದು ।
ಜಾಪ್ಯಮಿದಂ ಹದುಳದಿಂದೆ ನಿನಗಾಂ ಪೇಳ್ದೆಂ ॥
ಗೋಪ್ಯತರಂ ಪಲತೆರದಿಂ ।
ದಾಪ್ಯಾಯನವೆನಿಕುವೆನಗಿದೇ ಪ್ರೀತಿಕರಂ ॥ ೬೧ ॥

( ಇತರಕುಮತೀಯರಿಗೆ ಪೇಳದ ಪ್ರತಿಜ್ಞೆ )

ಆವೈಷ್ಣವಾದಿಗಳಿಗುಂ ।
ದೇವೀ ತಾಂ ಸ್ವಾಮಿ ಮುಖ್ಯಗಣಪತಿ ಮತಕಂ ॥
ಭಾವಾವೇಶದೊಳಾಗಲಿ ।
ನೀವಾರಿಗು ಪೇಳೆನೆಂದುಪಾದವ ಮುಟ್ಟೌ ॥ ೬೨ ॥
ನಾಸ್ತಿಕನೋಳ್ ಧೂರ್ತನೊಳುಂ ।
ದುಸ್ತ್ರಮುಪಾಖಂಡನೋಳಭಕ್ತನೊಳೆಂದುಂ ॥
ವಿಸ್ತರದಿಂ ವಂಚಿಪನೊಳು ।
ಪುಸ್ತಕಗುರುಗೀತೆಯಿದನು ಪೇಳ್ವುದು ಸಲ್ಲಂ ॥ ೬೩ ॥

( ಗುರುಗೀತಾಶ್ರವಣಕ್ಕೆ ಯೋಗ್ಯರು )

ಶುದ್ಧಗೆ ನಿರ್ವಂಚಕನಿಗೆ ।
ಶ್ರದ್ಧೆಯು ಸದ್ಭಕ್ತಿಯುಳ್ಳ ಶಿಷ್ಯಜನಕ್ಕಂ ॥
ಶುದ್ಧಗುರುಗೀತೆಯಂ ಸಂ ।
ಬುದ್ಧಳೆ ಪೇಳಲ್ಕೆ ಯೆನಗೆ ಪರಮಪ್ರೇಮಂ ॥ ೬೪ ॥

( ಗುರುವಂದನೆ )

ನಿಗಮಾಂತವರಿತ ಗುರುವಿಗೆ ।
ಸುಗಮಕಲಾನಾದಬಿಂದುವಂ ಮೀರಿದಗೆ ॥
ನಿಗಮಾಗಮವಂ ಬಲ್ಲಗೆ ।
ಸೊಗದಿಂದಂ ಬುದ್ಧಿಸಾಕ್ಷಿಗಾನತನಪ್ಪೆಂ ॥ ೬೫ ॥

( ದೀಕ್ಷೆಯಿಂದುಪದೇಶಪ್ರಾಪ್ತಿ )

ಗುರುವಂ ಜಗದಾಧಾರನ ।
ವರತಾರಕಮಂತ್ರಬೀಜವರ್ಣಾತ್ಮಕನಂ ॥
ಎರಗುತ ತಾಂ ದೀಕ್ಷಾರ್ಥಂ ।
ತ್ವರಿತದೊ ಳುಪದೇಶವಿಧಿಯ ಸಲೆಪೊಂದುವುದೌ ॥ ೬೬ ॥

( ಗುರುವೇಸಗುಣಬ್ರಹ್ಮಂ )

ಜಗದಾತ್ಮ ಶ್ರೀಗುರುವೇ ।
ನೆಗಳ್ದಮಹಾತರುವೆ ಪತ್ರಶಾಖಾನ್ವಿತಮುಂ ॥
ಮುಗುಳ್ದೊಂದೆ ಬೀಜಮುದರಿಂ ।
ದೊಗೆದುದು ಜಗವೆಲ್ಲಮದುವೆ ಪರಬೊಮ್ಮಂ ತಾಂ ॥ ೬೭ ॥

( ಗುರುವಿಂ ಸಚ್ಚಿದಾನಂದ ಪ್ರಾಪ್ತಿ )

ವಂದಿಪೆ ಪರಮಾನಂದನ ।
ಸುಂದರಸಾನಂದವಿಗ್ರಹಶ್ರೀಗುರುವಂ ॥
ಇಂದವನಾಸನ್ನಿಧಿಯಿಂ ।
ಪೊಂದುಗುಮೆಂದೆಂದು ಸಚ್ಚಿದಾನಂದಂ ದಲ್ ॥ ೧೮ ॥

( ಗುರುಪ್ರಾರ್ಥನಾ )

ನಿಚ್ಚಳಮಚ್ಯುತಮೂರ್ತಿಯೆ ।
ಸಚ್ಚಿತ್ಪರಮಾತ್ಮಗುರುವೆ ನಮಿಪೇಂ ನಿಚ್ಚಂ ॥
ಸಚ್ಚರಿತನೆ ಯುಪದೇಶದಿ ।
ಮಚ್ಚಿತ್ತದೊಳಿತ್ತೆ ಪಾವನಾಚ್ಯುತಪದವಂ ॥ ೧೯ ॥

( ಗುರುವಂದನಂ )

ಜಾಗ್ರತ್ಸ್ವಪ್ನಸುಷುಪ್ತಿಗ ।
ಳಗ್ರದ ತೂರ್ಯಾತಿತೂರ್ಯಸಾಕ್ಷಿಗೆ ಜಗದಾ ॥
ವ್ಯಗ್ರಸ್ಥಿತಿಲಯದುದಯಸ ।
ಮಗ್ರದ ನಾಟಕದ ನಿತ್ಯಸಾಕ್ಷಿಗೆ ನಮಿಪೇಂ ॥ ೨೦ ॥
ಎರುಗುವೆನಚ್ಯುತಗುರುವಿಗೆ ।
ಭರದಿಂದಂ ಶಿಷ್ಯಸಾಸ್ಮೃತಿಯ ಪರಿಹರಗೆ ॥
ಉರುಶಿಷ್ಯಸುವಾತ್ಸಲ್ಯಗೆ ।
ಪರತರಸಚ್ಚಿತ್ಸುಖಾತ್ಮಗೆರಗುವೆ ನಿನಗಂ ॥ ೨೧ ॥

( ವಿತ್ತಾಪಹಾರಿ ಚಿತ್ತಾಪಹಾರಿ ಗುರುಗಳು )

ತುಷ್ಟ್ಯದ್ಗುರುಗಳನೇಕರ್ ।
ಶಿಷ್ಯರ ವಿತ್ತಾಪಹಾರಚತುರರ್ ಚರಿಪರ್ ॥

ಹೃಷ್ಯನ್ಮನಸ್ಸೋರ್ವಂ ಗುರು ।
ಶಿಷ್ಯರಚಿತ್ತಾಪಹಾರನದು ದುರ್ಲಭ ತಾಂ ॥ ೭೨ ॥

( ಗುರುತತ್ವಕ್ಕೆ ಯೋಗ್ಯರು )

ಶುಚಿತನ ವಿವೇಕ ಮುಳ್ಳವ ।
ನಚಲನದಧ್ಯಾತ್ಮವಿದ್ಯೆಯೋಳ್ ಪ್ರಾಜ್ಞಂ ತಾಂ ॥
ಸುಚತುರಮತಿ ಯುತನಾವಂ ।
ಶುಚಿಮಾನಸನವಗೆ ಗುರುತನಂ ಶೋಭಿಸುಗುಂ ॥ ೭೩ ॥
ಕಾಮಕ್ರೋಧವಿಮುಕ್ತರ್ ।
ಸೀಮಿತಭಾಷಿಗಳು ಶಾಂತನಿರ್ಮಲಚಿತ್ತರ್ ॥
ಪ್ರೇಮಿ ಸದಾಚಾರಿಗಳು ।
ದ್ದಾಮಜಿತೇಂದ್ರಿಯರು ಸಾಧುಗಳ್ ಗುರುವೆನಿಪರ್ ॥ ೭೪ ॥

( ದೀಕ್ಷಾರ್ಹಶಿಷ್ಯಂ )

ಶ್ರೀ ಗುರುಭಕ್ತಿಯುನಾವನ ।
ದಾಗಮಶಾಸ್ತ್ರಾನುಸಾರದಿಂದಂಮಾಳ್ಪಂ ॥
ಆಗುರುಭಕ್ತಂ ಸತತಂ ।
ನೀಗುವನಾಘೋರಪಾಪವಂ ನಿಶ್ಶೇಷಂ ॥ ೭೫ ॥

( ದೀಕ್ಷಾರ್ಹನ ಚಿತ್ತಪರೀಕ್ಷೆ )

ಕಷ್ಟಕರದುಷ್ಟಸಂಗವ ।
ನಿಷ್ಟದುರಾಚಾರವಂ ದುರಿಚ್ಛೆಯ ಬಿಡುಗುಂ ॥
ಶಿಷ್ಟನುತಚಿತ್ತಚಿಹ್ನಮಿ ।
ದಿಷ್ಟದಿ ವಿಧಿಸುವುದು ದೀಕ್ಷೆಯಂ ಗುರುವೀಗಳಂ ॥ ೭೬ ॥

( ದೀಕ್ಷೆಗೆ ಯೋಗ್ಯನು )

ಚಿತ್ತದ ಚಂಚಲವಳಿದಂ ।
ಗುತ್ತಮಗಾದ್ವೈತಭಾವನಿರ್ಮೂಲನಿಗಂ ॥
ಮತ್ತೆ ಮದಕೋಪವಳಿದಗೆ ।
ಬಿತ್ತರದಿಂ ವಿಧಿಪುದವಗೆ ದೀಕ್ಷೆಯ ಗುರು ತಾಂ ॥ ೭೭ ॥
ಈಸಲ್ಲಕ್ಷಣಸಹಿತಂ ।
ಭೂಸಕಲಪ್ರಾಣಿಹಿತದಿ ನಿರತಂ ಸತತಂ ॥
ಲೇಸಪ್ಪಮಲಸುಜೀವನ ।
ಮಾಸಕ್ತಿಯೊಳವಗೆ ದೀಕ್ಷೆಯಂ ವಿಧಿಪುದು ತಾಂ ॥ ೭೮ ॥

( ಕ್ರಿಯಾದೀಕ್ಷೆ ಮಂತ್ರದೀಕ್ಷೆಗಳು )

ಕ್ರಿಯೆಯಿಂ ಕೂಡಿದದೀಕ್ಷಾ ।
ಚಯವೆನ್ನಿಂ ಮೊದಲು ಪೇಳಲಾಯ್ತಿಗಳ್ ನಿ ॥
ಷ್ಕ್ರಿಯಮಂತ್ರದೀಕ್ಷೆಯಿದನುಂ ।
ಪ್ರಿಯೆ ಸಾಂಗೋಪಾಗಂಮಾಗಿ ನಿನಗಾಂಪೇಳ್ದೆಂ ॥ ೭೯ ॥

( ಗುರುದೀಕ್ಷೆಯಿಂ ಸಾಯುಜ್ಯಂ )

ಉರುಕರ್ಮಶ್ರಮವಿಲ್ಲದೆ ।
ಗುರುಸಾಯುಜ್ಯವನು ಕೊಡುವ ಪೂಜ್ಯಮದೆನಿಪಾ ॥
ಗುರುದೀಕ್ಷೆಯಿಲ್ಲದಾವಂ ।
ಪರಿಪಾಲಿಸುವಂ ಗುರುತ್ವದಾಚಾರವ ತಾಂ ॥ ೮೦ ॥

( ದೇಶಿಕ ಪಾದಾಶ್ರಯದಿಂ ಭೋಗಮೋಕ್ಷಂ )

ಶಕ್ತಿಯುತಂ ತಾನಿರಲುಮ ।
ಶಕ್ತನು ತಾನಿದ್ದರುಂ ಸ್ವದೇಶಿಕಪದವಂ ॥

ಭಕ್ತಿಯೊಳಾಶ್ರೈವುದರಿಂ ।
ಭುಕ್ತಿಸುಮುಕ್ತಿಗಳವಕ್ಕು ಜನ್ಮಂ ಸಫಲಂ ॥ ೮೧ ॥
ಅತಿಯಶಸುಪಕ್ವಚಿತ್ತಗೆ ।
ಮತಿವಾನ್‌ಶ್ರದ್ಧಾಸುಭಕ್ತಿಯುತಗಂನತಗಂ ॥
ಹಿತ್ತದಿಂದಂಪೇಳ್ವುದಿದಂ ।
ಸತತಂಮತ್ಪ್ರೀತಿಗೋಸ್ಕರಂ ಗಿರಿಜಾತೇ ॥ ೮೨ ॥

( ಪರಮಾತ್ಮಾದಿ ರೂಪಗುರುವಂದನಂ )

ಅಮಿತಪ್ರಕಾಶರೂಪಗೆ ।
ಯಮಿನುತಸಚ್ಚಿತ್ಸುಖಾತ್ಮಪರಮಾತ್ಮನಿಗಂ ॥
ನಮಿಪೇಂ ಶ್ರೀಗುರುನಾಥಗೆ ।
ಕ್ರಮದಿಂ ವ್ಯಾಪಕಗನಂತಮೂರ್ತಿಗೆ ನಿಚ್ಚಂ ॥ ೮೩ ॥

( ಬೋಧೆಯಿಂದೈಕ್ಯಾನಂದದಾಯಕ )

ಸತ್ಯಸುಖದ ಸ್ವರೂಪಗೆ ।
ನಿತ್ಯದಿ ಬೋಧಿಸುತಲೈಕ್ಯಸುಖವೀಯುವಗಂ ॥
ಅತ್ಯಧಿಕಬುದ್ಧಿ ಸಾಕ್ಷಿಗೆ ।
ನುತ್ಯಗೆ ವೇದಾಂತವಂತಗುರುವಿಗೆ ನಮಿಪೇಂ ॥ ೮೪ ॥

( ಜ್ಞಾನಬೋಧೆಗಾಗಿ ಲೀಲಾವಿಗ್ರಹಧಾರಕ )

ಎರಗುವೆನೊಡೆಯಾ ! ಭಗವನ್ ! ।
ಗುರುರೂಪದಿ ತೋರ್ವ ಶಿವನೆ ನಿನಗಂ ನಿಚ್ಚಂ ॥
ಪರವಿದ್ಯೆಗಳವತಾರದ ।
ಪರಸಿದ್ಧಿಗನೇಕವಿಗ್ರಹವ ತಾಳ್ದಿರ್ಪೈ ॥ ೮೫ ॥

( ಶಿವತತ್ವರೂಪ )

ನವರೂಪಗಂ ನವೀನಗೆ ।
ಭವದಜ್ಞಾನಾಂಧಕಾರವಂ ಪರಿಹರಿಪಾ ॥
ರವಿಗಂ ಚಿದ್ಘನಮೂರ್ತಿಗೆ ।
ಶಿವಪರಮಾರ್ಥೈಕರೂಪಗುರುವಿಗೆ ನಮಿಪೇಂ ॥ ೮೬ ॥

( ಸ್ವತಂತ್ರನಾದರೂ ಶಿಷ್ಯಾಧೀನ )

ಶಿವಮೂರ್ತಿಗಂ ಸ್ವತಂತ್ರಗೆ ।
ಭುವನವ ಪೊರೆಯಲ್ಕೆ ದಯದಿ ನಿರ್ಮಿತತನುಗಂ ॥
ತವೆ ಪರತಂತ್ರಗೆ ಭಕ್ತರೊ ।
ಳವನತಭವ್ಯರ್ಗೆ ಭವ್ಯರೂಪಿಗೆ ನಮಿವೇಂ ॥ ೮೭ ॥

( ಶ್ರೇಷ್ಠರಿಗೆಶ್ರೇಷ್ಠ )

ಸುವಿವೇಕರಿಗೆ ವಿವೇಕಂ ।
ಸುವಿಮರ್ಶರಿಗೆ ವಿಮರ್ಶಕಂ ಸುಜ್ಞರಿಗಂ ॥
ತವೆ ಸುಜ್ಞಂ ಸುಪ್ರಭರಿಗೆ ।
ಸುವಿಮಲಸಚ್ಚಿತ್ಪ್ರಕಾಶಗುರುವಂ ನಮಿಪೇಂ ॥ ೮೮ ॥

( ಸರ್ವತ್ರವಂದನದಿಂಚಿತ್ತಗತನಾಗೆಂದು ಪ್ರಾರ್ಥನೆ )

ಮುಂದುಗಡೆ ಪಿಂದುಗಡೆಯೋಳ್ !
ಚೆಂದದೊಳೆಡಬಲದಿ ಮೇಲೆ ಕೆಳಗುಂ ನಮಿಕುಂ ॥
ಇಂದೆನ್ನ ಚಿತ್ತರೂಪದಿ ।
ತಂದೆಯೆ ನಿನ್ನಾಸನವನು ಮಾಡೆನುತೊರೆಗುಂ ॥ ೮೯ ॥

( ವಾಕ್ಸುಧೆಯಿಂಭವವಿಷಪರಿಹಾರ )

ಗುರುವರ ನಿನಗಾಂ ನಮಿಪೆಂ ।
ಸ್ಥಿರಸಹಜಾನಂದರೂಪಗಂ ಪಾವನಗಂ ॥
ನೆರೆ ಯಾವನ ವಾಗಮೃತದಿ ।
ಭರದಿಂ ಸಂಸಾರವೆಂಬವಿಷ ಪರಿಹರಿಕುಂ ॥ ೯೦ ॥

( ಸಯುಕ್ತಿವಾಕ್ಯದಿಂ ಶಿಷ್ಯೋದ್ಧಾರ )

ಬಹುವಿಧಯುಕ್ತಿಯ ಬೋಧದಿ ।
ವಹಿಲದಿ ದಾಂಟುವದು ಶಿಷ್ಯಸಂತತಿಯೆಲ್ಲಂ ॥
ಮಹಿಮನ ಕರುಣಾಸಾರದ ।
ವಿಹಿತಶ್ರುತಿಯಿಂದೆ ಗುರುಚಿದಚ್ಯುತ ಪದತಾಂ ॥ ೯೧ ॥

( ಅಚ್ಯುತಪದದಾಯಕ )

ಮೆಚ್ಚುಗೆಯಚ್ಯುತ ನಿನಗಂ ।
ಸಚ್ಚಿತ್ಪರಮಾತ್ಮನೆನಿಪಗುರುವರ ನಮಿಪೆಂ ॥
ಸ್ವೇಚ್ಛಸ್ವಾರಾಮದ ಪದ ।
ವಿಚ್ಛಿಪರಿಗೆ ದಯದೊಳಿತ್ತೆ ಯಚ್ಯುತಪದವಂ ॥ ೯೨ ॥

( ಅಜ್ಞಾನತಮೋರವಿ )

ಕರುಣಾಮೃತಸಿಂಧುವಿಗಂ ।
ಶರಣಾಗತಶಿಷ್ಯರಿಗೆ ಸುಮಾರ್ಗಪ್ರದಗಂ ॥
ಚಿರದಜ್ಞಾನದ ಕತ್ತಲೆ ।
ಗುರುಪೂರ್ವಗೆ ಗುರುವಿಗೆರಗುತೆನಚ್ಯುತನ ॥ ೯೩ ॥

( ಭಕ್ತೇಷ್ಟದಾನಿಸಿಂಹ )

ಓಮಚ್ಯುತನಿಗೆ ಶಿಷ್ಯರ ।
ಕಾಮಿತಭವಸುಖದಹೇತುವಿಗೆ ಗುರುವರಗಂ ॥
ಪ್ರೇಮಿ ಚಿದಾನಂದಾತ್ಮಗೆ ।
ನೇಮದಿ ಭಕ್ತೇಷ್ಟದಾನಿಸಿಂಹಗೆ ನಮಿಪೇಂ ॥ ೯೪ ॥

( ಏಕಾಕ್ಷರಶಿಕ್ಷಕ ಗುರುತಿರಸ್ಕಾರದಿಂ ನರಕಂ )

ಒಂದಕ್ಷರವಂ ಕಲಿಸಿದ ।
ಹಿಂದಿನ ಗುರುವರನ ನಾವಂದಿಸದಿರ್ಪಂ ॥
ಪೊಂದಿ ಶತಶುನಕಜನ್ಮವ ।
ನಿಂದಿತಚಂಡಾಲಜನ್ಮದೋಳ್ ಪುಟ್ಟುವ ದಲ್ ॥ ೯೫ ॥

( ಗುರುಮಂತ್ರತ್ಯಾಗಾದಿಯಿಂ ಮರಣಾದ್ಯನಿಷ್ಟಂ )

ಗುರುವಂ ಬಿಡುವುದರಿಂದಂ ।
ಮರಣಂ ಮಂತ್ರವನು ಬಿಡಲು ಬಡತನಮುಕ್ಕುಂ ॥
ಗುರುವಂ ಮಂತ್ರವ ಬಿಡಲವ ।
ಭರದಿಂ ರೌರವದ ನರಕವಂ ಪೊಂದುವನೌ ॥ ೯೬ ॥

( ಹರನಿಂದಂ ಗುರುವಧಿಕಂ )

ಹರ ಕೋಪಿಸೆ ಗುರು ಕಾಯ್ವಂ ।
ಗುರು ತಾಂ ಕೋಪಿಸಲು ಹರನು ಪೊರೆಯನದೆಂತುಂ ॥
ಅರಿತದರಿಂ ಬಹುಯತ್ನದಿ ।
ಗುರು[illegible]ಪ್ಪ[illegible] ॥ [illegible] ॥

( ಗುರುರಾಜ ಮಂತ್ರಮಹಿಮೆ )

ಭವಜಲಧಿಯಿಂದ ದಾಂಟಿಪ |
ತವೆ ಯಜಮುಖದೇವಮುನಿಸುಪೂಜಿತಮಂತ್ರಂ ||
ಭವರೋಗಭಯವ ಬಡತನ |
ತವಿಸುವ ಗುರುರಾಜಸಿದ್ಧಮಂತ್ರವ ನಮಿಪೇಂ || ೯೮ ||

( ಸಪ್ತಕೋಟಿಮಂತ್ರಗಳಲ್ಲಿ ಗುರುವೆಂಬಮಂತ್ರವೇ ಶ್ರೇಷ್ಠ )

ವರಕೋಟಿಸಪ್ತಮಂತ್ರಗ |
ಳುರೆಚಿತ್ತಭ್ರಾಂತಿಯನ್ನೆ ಮಾಳ್ಪವು ನಿಜದಿಂ ||
ಪರತರ ಮಂತ್ರಮಿದೊಂದೇ |
ಗುರುವೆಂಬೆರಡಕ್ಷರುಳ್ಳದಾಶ್ರುತಿ ಸಾರಂ || ೯೯ ||

( ತನಗೂ ಜಗತ್ತಿಗೂ ಅಭೇದಭಾವನೆ )

ಎಲ್ಲವು ನಾಂ ತತ್ತ್ವಪಯೋ |
ಳಿಲ್ಲವು ತಾಂ ತೋರ್ಪುದದುವೆ ಕಲ್ಪಿತಮೆನ್ನೋಳ್ ||
ಬಲ್ಲೆನು ಸದಾತ್ಮರೂಪನ |
ಮೆಲ್ಲನೆ ತತ್ಪಾದಪದ್ಮಕೆರಗುವೆ ನಿಚ್ಚಂ || ೧೦೦ ||

( ಚಿತ್ಪ್ರಕಾಶದಾಯಕಗುರುಪ್ರಾರ್ಥನಾ )

ಅಜ್ಞಾನತಮದೊಳಂಧಗೆ |
ಸುಜ್ಞಾನಿಯೆ ವಿಷಯನಿರತಮಾನಸಯುತಗಂ ||
ಸುಜ್ಞಾನಪ್ರಭೆ ಯಿಾಯುತ |
ಲಜ್ಞಾನಿಗನುಗ್ರಹವನು ಮಾಳ್ಪೈ ಪ್ರಭುವೇ || ೧೦೧ ||

( ಮಂಗಲಾಚರಣೆ )

ತಾಂಗುರು ಸಾಕ್ಷಾನ್ಮಂಗಲ ।
ವೊಂಗುರುವೇ ಬ್ರಹ್ಮಮೂರ್ತಿ ಜಯಮಂಗಲವೈ ॥
ತಾಂಗುರುವೆವಿಷ್ಣುಮಂಗಲ ।
ವೋಂವೇಗುರುಶಕ್ತಿಯುತಶಿವಂ ಮಂಗಳವೈ ॥ ೧೦೨ ॥

ಇಂತೀಶ್ರೀ ಸ್ಕಾಂದ ಮಹಾಪುರಾಣದ ಉತ್ತರಖಂಡದಲ್ಲಿ ಶಿವಪಾರ್ವತೀ ಸಂವಾದ ರೂಪವಾದ ಗುರುಗೀತಾಸ್ತೋತ್ರದ ಕನ್ನಡ ಕಂದಪದ್ಯಾನುವಾದದೋಳ್ ಬನ್ನಿಗೋಳ ಬೃಹನ್ಮಠೀಯ ಉಭಯ ಕವಿತಾಭೂಷಣ ಅಮರನಾಥ ಶಾಸ್ತ್ರಿ ವಿರಚಿತದೋಳ್ ನಿಷ್ಠಾಯೋಗವೆಂಬ ದ್ವಿತೀಯಾಧ್ಯಾಯವು ಸಂಪೂರ್ಣಂ. ಭದ್ರಂ. ಶುಭಂ ಮಂಗಳಂ.

" ಶಕ್ತಿವಿಶಿಷ್ಟಾದ್ವೈತಶಿವೋವಿರಾಜತೇತರಾಂ "

ಶ್ರೀಃ

ಶ್ರೀಗುರುಧ್ಯಾನದ ೧೦ ಪದ್ಯಗಳು, ಕವಿಯ ಪೀಠಿಕೆಯ ಪದ್ಯಗಳು ೫, ಭಕ್ತಿಜ್ಞಾನ ವೈರಾಗ್ಯವೆಂಬ ಪ್ರಥಮಾಧ್ಯಾಯದ ೨೦೮ ಪದ್ಯಗಳು, ನಿಷ್ಠಾಯೋಗವೆಂಬ ದ್ವಿತೀಯಾಧ್ಯಾಯದ ೧೦೨ ಪದ್ಯಗಳು, ಅಂತು ೩೨೫ ಪದ್ಯಗಳು, ಗುರುರಾಜಾಷ್ಟಕದ ೧೧ ಪದ್ಯಗಳು ಸಹಿತಂ ೩೩೬ ಪದ್ಯಗಳು.

॥ ಶ್ರೀಗುರು ಪರಬ್ರಹ್ಮನಿಗೆ ಪ್ರಣಾಮಂ ॥

" ಗುರುರಾಜಾಷ್ಟಕಂ "

ಅಂದದ ಮೈ ಚೆಂದದ ಸಿರಿ ।
ಚೆಂದಿರನೋಲ್ ಜಸವು ಮೇರುಸಮಸಾಧನವುಂ ॥
ಪೊಂದದೆ ಮನ ಗುರುಪದದೋಳ್ ।
ಇಂದದರಿಂದೇನುಫಲವುಫಲಮದರಿಂದೇಂ ॥ ೧ ॥

ಮಕ್ಕಳ್ ನೊಮ್ಮೆಕ್ಕಳುಗಳ್ |
ಕಕ್ಕುಲತೆಯು ಸತಿಯು ಸಕಲಭಾಗ್ಯಂ ಬಳಗಂ ||
ಚೊಕ್ಕಮನೆ ತಕ್ಕ ಗೆಳೆಯಂ |
ಲೆಕ್ಕಮದೇಂ ? ಗುರುವಿನಡಿಯೊಳಿರದಿರೆ ಮನ ತಾಂ || ೨ ||

ವದನದೊಳಾಪಳವಾತುಗ |
ಳುದಿತಾಮಲಶಾಸ್ತ್ರವಿದ್ಯೆಯಾರಂಗಗಳುಂ ||
ಚದುರಂ ಗದ್ಯದಿಪದ್ಯದೊ |
ಳದು ಮನ ಗುರುಪದದೊಳಿರದೊಡೇಂಫಲಮುದರಿಂ ? || ೩ ||

ವನದೋಳ್ ಭವನದಿ ತಪವುಂ |
ತನುಮನಬುದ್ಧಿಯೊಳು ಪುಣ್ಯಕಾರ್ಯಂ ಸತಿಯಿಂ ||
ಮನವಿರದಿರೆ ಗುರುಪದದೋಳ್ |
ತನಗದರಿಂ ಫಲಮುದೇನು ಫಲಮುದರಿಂದೇಂ ? || ೪ ||

ಯೋಗಿವರನಾದೊಡೇನೈ |
ಭೋಗಿಯು ಪರವಾದಿರಾಜನಾದೊಡದೇನೈ ? ||
ರಾಗವು ಧನಕಾಂತಾಸ್ಯದಿ |
ಶ್ರೀಗುರುಪಾದದೊಳು ಮನವು ನಿಲದಿರೆ ಫಲವೇಂ ? || ೫ ||

ಬಳಸಿರ್ದುಮನರ್ಘ್ಯಂಗಳ |
ಬೆಳಗುವರತ್ನಗಳಕಾಮಿನಿಯಯಾಮಿನಿಯೋಳ್ ||
ಬೆಳಗುಂವರೆಗಪ್ಪಿದೊಡೇಂ |
ತಿಳಿಮನ ಗುರುಪದದೊಳಿರದೊಡೇಂ ಫಲಮುದರಿಂ ? || ೬ ||

ಪೊರನಾಡುಗಳೊಳು ಮಾನ್ಯಂ |
ನೆರೆತಾಯ್ನಾಡೊಳು ಸುಧನ್ಯನನ್ಯಂ ನಡೆಯೋಳ್ ||
ಸರಿಯಿಲ್ಲಾವಂ ತನ್ನಿಂ |
ದಿರದೊಡೆ ಗುರುಪದದಿ ಮನವು ಫಲಮುದರಿಂದೇಂ ? || ೭ ||

ಚಾಗದ ಜಸವೊಣ್ದೆಸೆಗಂ |
ಭೋಗದ ಭೂಭಾಗವಸ್ತುವೆಲ್ಲಂ ಕರದೋ ||
ಳೀಗು ಮನಗ್ರಹದಿಂದಂ |
ಶ್ರೀಗುರುಪಾದದೊಳು ಮನವು ನಿಲದಿರೆ ಫಲವೇಂ ? || ೮ ||

ತಪ್ಪದೆ ಭೂಪಾಲರ್ಕಳ |
ದಿಪ್ಪೆಡೆಯೋಳ್ ನುತಿಸುತವನ ಪಾದಾಂಬುಜದೋಳ್ ||
ಕಪ್ಪವನೊಪ್ಪಿಸುತಿರ್ಪೊಡ |
ವೊಪ್ಪದು ಗುರುಪದದಿ ಮನವು ನಿಲದಿರೆ ಫಲವೇಂ || ೯ ||

ಶ್ರೀಗುರುರಾಜಾಷ್ಟಕವಂ |
ರಾಗದಿ ಪಠಿಸುವನೆ ಪುಣ್ಯದೇಹಿ ಯನಿಪ್ಪಂ ||
ಶ್ರೀಗುರುವಚನದಿ ಮನವಿರೆ |
ಭೋಗಿ ಪರಾಕ್ರಮಿಗಳೆಲ್ಲ ಮುಕ್ತಿನೃಪಾಲರ್ || ೧೦ ||

ಶ್ರೀಗುರುಶಾಸನದಿಂದಂ |
ಶ್ರೀಗುರುಶಾಸನದಿ ಗುರುಸುಶಾಸನದಿಂದಂ ||
ಶ್ರೀಗುರು ಶಿವ ಶಿವನೇಗುರು |
ಶ್ರೀಗುರುವೇ ಶಿವನು ಶಿವನೆ ಗುರುವದು ವಿದಿತಂ || ೧೧ ||

ಇಂತು ಶ್ರೀಮತ್ಪರಮಹಂಸ ಪರಿವ್ರಾಜಕಾಚಾರ್ಯ ಸದ್ಗುರು ಶಂಕರಾಚಾರ್ಯ ವಿರಚಿತ ಗುರುರಾಜಾಷ್ಟಕದ ಕನ್ನಡ ಕಂದಪದ್ಯಾನುವಾದದೋಳ್ ಉಭಯ ಕವಿತಾಭೂಷಣ ವಿದ್ವಾನ್ ಅಮರನಾಥಶಾಸ್ತ್ರಿ ವಿರಚಿತದೋಳ್

ಗು ರು ರಾ ಜಾ ಷ್ಟ ಕ ೦ ಸ ಮಾ ಪ್ತ ೦.

ಶ್ರೀ: ಭದ್ರಂ ಶುಭಂ ಮಂಗಳಂ.

ಶ್ರೀ ಸದ್ಗುರು ಪರಬ್ರಹ್ಮಣೇನಮಃ.

ವಟವಿಟಪಿಸಮೀಪೇ ಪೂರ್ವಭಾಗೇ ನಿಷಣ್ಣಂ ।
ಸಕಲಮುನಿಜನಾನಾಂ ಜ್ಞಾನದಾತಾರಮಾರಾತ್ ॥
ತ್ರಿಭುವನಗುರುಮೀಶಂ ದಕ್ಷಿಣಾಮೂರ್ತಿದೈವಂ ।
ಜನನಮರಣದುಃಖಚ್ಛೇದದಕ್ಷಂ ನಮಾಮಿ ॥

ಶ್ರೀ ಜಾತವೇದಸೇ ಗುರವೇನಮಃ.

ಶ್ರೀ ಸ್ಕಾಂದೇ ಮಹಾಪುರಾಣೇ ಉತ್ತರಭಾಗೇ ಗುರುಗೀತಾಸ್ತೋತ್ರಂ.
ಆದೌ ಶ್ರೀ ಗುರುಪಾದಪೂಜಾವಿಧಾನಂ ॥ ಸಂಕಲ್ಪಃ ॥

ಓಂ ಶಿವಶಿವ ಶಂಭೋರಾಜ್ಞಯಾ ಪ್ರವರ್ತಮಾನಸ್ಯಾದ್ಯ ಬ್ರಹ್ಮಣೋ ದ್ವಿತೀಯಪರಾರ್ಧೇ ಶ್ರೀ ಶ್ವೇತ ವರಾಹಕಲ್ಪೇ ವೈವಸ್ವತ ಮನ್ವಂತರೇ ಕಲಿಯುಗೇ ಪ್ರಥಮಪಾದೇ ಭರತವರ್ಷೇ ಭರತಖಂಡೇ ಜಂಬೂದ್ವೀಪೇ ಮೇರೋರ್ದಕ್ಷಿಣದಿಗ್ಭಾಗೇ ದಂಡಕಾರಣ್ಯೇ ಗೋದಾವರ್ಯಾಃ ದಕ್ಷಿಣತೀರೇ ಶಾಲಿವಾಹನಶಕೇ ಬೌದ್ಧಾವತಾರೇ ಶ್ರೀ ಸಂಪಾಸಂಪದ್ಭೂಮ್ಯಾಂ ಅಸ್ಮಿನ್‌ವರ್ತಮಾನೇ ವ್ಯಾವಹಾರಿಕ ಚಾಂದ್ರಮಾನೇ ಪ್ರಭವಾದಿ ಷಷ್ಠಸಂವತ್ಸರಾಣಾಂ ಮಧ್ಯೇ ——— ಸಂವತ್ಸರೇ ಅಮುಕಾಯನೇ ಅಮುಕಋತೌ ಅಮುಕಮಾಸೇ ಅಮುಕಪಕ್ಷೇ ಶುಭವಾಸರೇ ಶುಭನಕ್ಷತ್ರೇ ಶುಭಯೋಗೇ ಶುಭಕರಣೇ ಏವಂಗುಣವಿಶೇಷಣ ವಿಶಿಷ್ಟಾಯಾಂ ಅಸ್ಯಾಂ ಶುಭತಿಥೌ ಶುಭಫಲಪ್ರಾಪ್ತ್ಯರ್ಥಂ ಸಕಲಕಾಮ್ಯಾರ್ಥಸಿಧ್ಯರ್ಥಂ ಶ್ರೀ ಸಾಂಬಸದಾಶಿವ ಪ್ರೀತ್ಯರ್ಥಂ ಸದ್ವಂಶೋದ್ಧಾರ ಪರಮಗುರು ಪ್ರೀತ್ಯರ್ಥಂ ಶ್ರೀ ಗುರುಗೀತಾಪಠನ ಫಲಾವಾಪ್ತ್ಯರ್ಥಂಚ ಪಂಚಮುದ್ರಾವಿಭೂಷಿತ ಶ್ರೀಗುರುವರೇಂದ್ರ ಶಿವಾಚಾರ್ಯ ಮಹಾಸ್ವಾಮಿನಾಂಪಾದಪೂಜಾಂ ಕರಿಷ್ಯೇ ॥ಇತಿಸಂಕಲ್ಪ॥

ಆದೌನಿರ್ವಿಘ್ನತಾಸಿಧ್ಯರ್ಥಂ ಗಣಪತಿಧ್ಯಾನಂ ।
ಶ್ರೀ ಗಣೇಶ ನಮಸ್ತುಭ್ಯಂ । ಸರ್ವವಿದ್ಯಾಪ್ರದಾಯಕ ॥
ಕಾರ್ಯಾರಂಭೇ ಪೂಜಯಾಮಿ । ಸರ್ವವಿಘ್ನಂ ನಿವಾರಯ

ಇತಿಧ್ಯಾತ್ವಾತತ್ಪೂಜಾಂಕುರ್ಯಾತ್

## ಅಥ ಉಪಚಾರಮಂತ್ರಂ.

ಓಂ ಧ್ಯಾಯಾಮಿಧ್ಯಾನಂ ಸಮರ್ಪಯಾಮಿ । ಓಂ ಆವಾಹಯಾಮಿ ಆಸನಂ ಸಮರ್ಪಯಾಮಿ । ಪಾದಯೋಃಪಾದ್ಯಂ ಸಮರ್ಪಯಾಮಿ । ಹಸ್ತಯೋರರ್ಘ್ಯಂ ಸಮರ್ಪಯಾಮಿ । ಮುಖೇ ಆಚಮನೀಯಂ ಸಮರ್ಪಯಾಮಿ ॥ಭಸ್ಮ॥ ಅನಾದಿಶಾಶ್ವತಂ ಶಾಂತಂ । ವ್ಯೋಮಾತೀತಂ ನಿರಂಜನಂ । ಚಿದ್ಭಸ್ಮ ವೃಷಭಾಕಾರಂ । ಚಿದಂಗಂ ಭಸ್ಮಧಾರಣಂ । ಓಂ ಗುರವೇನಮಃ ಭಸ್ಮಧಾರಯಾಮಿ ॥ ॥ ಗಂಧಂ ॥ ಗಂಧದ್ವಾರಾಂದುರಾಧರ್ಷಾಂ । ನಿತ್ಯಪುಷ್ಟಾಂ ಕರೀಷಿಣೀಂ । ಈಶ್ವರೀಂ ಸರ್ವಭೂತಾನಾಂ । ತಾಮಿಹೋಪಹ್ವಯೇಶ್ರಿಯಂ । ಓಂ ಗುರುವೇನಮಃ ಗಂಧಂಧಾರಯಾಮಿ ॥ ಅಕ್ಷತಃ ॥ ಅಕ್ಷತಾನ್ ಧವಳಾನ್ ದಿವ್ಯಾನ್ । ತಿಲತಂಡುಲ ಮಿಶ್ರತಾನ್ ಅರ್ಪಯಾಮಿ ಸದಾಭಕ್ತ್ಯಾ । ಸ್ವೀಕುರು ಶ್ರೀ ಜಗದ್ಗುರೋ । ಓಂ ಗುರವೇನಮಃ ಅಕ್ಷತಾನ್‌ಧಾರಯಾಮಿ ॥ ಪತ್ರಪುಷ್ಪಾಣಿ ॥ ಸೇವಂತಿಕಾಬಕುಲ ಚಂಪಕ ಪಾಟಲಾಬ್ಜೈಃ । ಪುನ್ನಾಗಜಾಜಿಕರವೀರ ರಸಾಲಪುಷ್ಪೈಃ । ಬಿಲ್ವಪ್ರವಾಳ ತುಲಸೀದಳ ಮಾಲಿಕಾಭಿಃ । ತ್ವಾಂಪೂಜಯಾಮಿ ಜಗದೀಶ್ವರಮೇಪ್ರಸೀದ । ಓಂ ಗುರವೇನಮಃ ನಾನಾವಿಧ ಪತ್ರಪುಷ್ಪಾಣಿ ಸಮರ್ಪಯಾಮಿ ॥ ಧೂಪಃ ॥ ದಶಾಂಗಗುಗ್ಗುಲೋಪೇತಂ । ಸುಗಂಧಂ ಸುಮನೋಹರಂ । ಧೂಪಯಾಮಿ ಗುರುಶ್ರೇಷ್ಠ । ಪ್ರೀತ್ಯರ್ಥಂ ಪ್ರತಿಗೃಹ್ಯತಾಂ । ಓಂಗುರವೇನಮಃ ಧೂಪಮಾಘ್ರಾಪಯಾಮಿ ॥ ದೀಪಃ ॥ ಸಾಜ್ಯಂತ್ರಿವರ್ತಿಸಂಯುಕ್ತಂ । ವಹ್ನಿನಾ ಯೋಜಿತಂ ಮಯಾ । ಗೃಹಾಣ ಮಂಗಳಂದೀಪಂ । ತ್ರೈಲೋಕ್ಯತಿಮಿರಾಪಹಂ ॥ ಓಂ ಗುರವೇನಮಃ ದೀಪಂ ನೀರಾಜಯಾಮಿ ॥ ಕರ್ಪೂರದೀಪಃ ॥ ಕರ್ಪೂರಗೌರಂ ಕರುಣಾವತಾರಂ । ಸಂಸಾರಪಾರಂ ಗುಣರತ್ನಹಾರಂ ॥ ಸದಾವಸಂತಂ ಹೃದಯಾರವಿಂದೇ । ಗುರುಂ ಭಜತ್ಕಲ್ಪತರುಂ ನಮಾಮಿ ॥ ಓಂಗುರವೇನಮಃ ಕರ್ಪೂರದೀಪಂ ನೀರಾಜಯಾಮಿ ॥ ನೈವೇದ್ಯಂ ॥ ನೈವೇದ್ಯಂ ಷಡ್ರಸೋಪೇತಂ । ದಧಿಮಧ್ವಾಜ್ಯಸಂಯುತಂ । ನಾನಾಭಕ್ಷ್ಯ ಫಲೋಪೇತಂ ಗೃಹಾಣ ಗುರುಪುಂಗವ ॥ ಓಂ ಗುರವೇನಮಃ ನೈವೇದ್ಯಂ ನಿವೇದಯಾಮಿ ॥ ಪಾನೀಯಂ॥ ಘನಸಾರಸುಗಂಧೇನ ಮಿಶ್ರಿತಂ ಪುಷ್ಪವಾಸಿತಂ । ಗುರೋಗೃಹಾಣ ಪಾನೀಯಂ। ಶೀತಲಂ ಸುಮನೋಹರಂ ॥ ಓಂ ಗುರವೇನಮಃ ಪಾನೀಯಂ ಸಮರ್ಪಯಾಮಿ ॥ ॥ ತಾಂಬೂಲಂ ॥ ಪೂಗೀಫಲಸಮಾಯುಕ್ತಂ । ನಾಗವಲ್ಲೀ ದಳೈರ್ಯುತಂ

ಕರ್ಪೂರಚೂರ್ಣ ಸಂಯುಕ್ತಂ । ತಾಂಬೂಲಂ ಪ್ರತಿಗೃಹ್ಯತಾಂ । ಓಂ ಗುರವೇ ನಮಃ । ತಾಂಬೂಲಂ ಸಮರ್ಪಯಾಮಿ ॥ ದಕ್ಷಿಣಾ ॥ ಹಿರಣ್ಯಗರ್ಭಗರ್ಭಸ್ಥಂ । ಹೇಮಬೀಜಂ ವಿಭಾವಸೋಃ ॥ ಅನಂತ ಪುಣ್ಯಫಲದಂ । ದಾಂತಿಂ ಶಾಂತಿಂ ಪ್ರಯಚ್ಛಮೇ ॥ ಓಂ ಗುರವೇನಮಃ ಹಿರಣ್ಯದಕ್ಷಿಣಾಂ ಸಮರ್ಪಯಾಮಿ । ಶ್ರೀಮದ್ಗುರುಪ್ರೀತ್ಯರ್ಥಂ ಪುನರರ್ಘ್ಯಂ ಸಮರ್ಪಯಾಮಿ ॥ ಛತ್ರಂ ಚಾಮರಸಂಯುತಂ ವ್ಯಜನಕಂಭದ್ರಂ ಧ್ವಜಂದರ್ಪಣಂ । ವೀಣಾಭೇರಿಮೃದಂಗ ಕಾಹಳಯುತಂ ಗೀತಂಚ ನೃತ್ಯಂತಥಾ । ಸಾಷ್ಟಾಂಗಪ್ರಣತಿಂ ಶ್ರುತಿಸ್ತುತಿಯುತಂ ಹ್ಯೇತತ್ಸಮಸ್ತಂ ಮಯಾ । ಸಾಕಲ್ಯೇನ ಸಮರ್ಪಿತಂತವ ವಿಭೋ ಪೂಜಾಂಗುರೋಸ್ವೀಕುರು । ಓಂ ಗುರುವೇನಮಃ ಛತ್ರಚಾಮರಾದಿನಾನಾವಿಧೋಪಚಾರಂ ಸಮರ್ಪಯಾಮಿ॥ ॥ ನಮಸ್ಕಾರಃ॥ ಉರಸಾಶಿರಸಾದೃಷ್ಟ್ಯಾ ಮನಸಾ ಶ್ರದ್ಧಯಾ ತಯಾ॥ ಪದ್ಭ್ಯಾಂ ಕರಾಭ್ಯಾಂ ಕರ್ಣಾಭ್ಯಾಂ । ಸಾಷ್ಟಾಂಗಂ ಪ್ರಣಮಾಮ್ಯಹಂ ॥ ಓಂಗುರವೇ ನಮಃ ಸಾಷ್ಟಾಂಗಂ ನಮಸ್ಕರೋಮಿ ॥ಪ್ರದಕ್ಷಿಣಂ॥ ಯಾನಿ ತಾನೀಹಪಾಪಾನಿ। ಜನ್ಮಾಂತರ ಕೃತಾನಿಚ॥ ತಾನಿತಾನಿಪ್ರಣಶ್ಯಂತಿ। ಪ್ರಾದಕ್ಷಿಣ್ಯಾತ್ ಪದೇಪದೇ॥ಓಂ ಗುರವೇನಮಃ ಪ್ರದಕ್ಷಿಣಂ ಕರೋಮಿ ॥ ಪ್ರಾರ್ಥನಾ ॥ ಪಾಪೋಽಹಂ ಪಾಪಕರ್ಮಾಹಂ । ಪಾಪಾತ್ಮಾ ಪಾಪಸಂಭವಃ ॥ ತ್ರಾಹಿ ಮಾಂಕೃಪಯಾ ಸ್ವಾಮಿನ್ । ಸರ್ವಪಾಪಹರೋಭವಾನ್ । ಓಂಗುರವೇನಮಃ ಪ್ರಾರ್ಥನಾಂ ಸಮರ್ಪಯಾಮಿ। ಅಥ ಮಾನಸೋಪಚಾರ ಪಂಚಕ ಸಮರ್ಪಣಂ ॥ ಲಂಪೃಥಿವ್ಯಾತ್ಮನೇ ಗಂಧತನ್ಮಾತ್ರಾ ಪ್ರಕೃತ್ಯಾನಂದಾತ್ಮನೇ ಶ್ರೀಗುರುದೇವಾಯನಮಃ ಗಂಧಂ ಸಮರ್ಪಯಾಮಿ । ಹಂ ಆಕಾಶಾತ್ಮನೇ ಶಬ್ದತನ್ಮಾತ್ರಾ ಪ್ರಕೃತ್ಯಾನಂದಾತ್ಮನೇ ಶ್ರೀಗುರುದೇವಾಯನಮಃ ಆಕಾಶಾತ್ಮಕಂ ಪುಷ್ಪಂ ಸಮರ್ಪಯಾಮಿ ॥ ಯಂ ವಾಯ್ವಾತ್ಮನೇ ಸ್ಪರ್ಶತನ್ಮಾತ್ರಾ ಪ್ರಕೃತ್ಯಾನಂದಾತ್ಮನೇ ಶ್ರೀಗುರು ದೇವಾಯನಮಃ ವಾಯ್ವಾತ್ಮಕಂ ಧೂಪಂ ಸಮರ್ಪಯಾಮಿ ॥ ರಂವಹ್ನ್ಯಾತ್ಮನೇ ರೂಪತನ್ಮಾತ್ರಾ ಪ್ರಕೃತ್ಯಾನಂದಾತ್ಮನೇ ಶ್ರೀಗುರುದೇವಾಯನಮಃ ತೇಜ ಆತ್ಮಕಂದೀಪಂ ಸಮರ್ಪಯಾಮಿ ॥ ವಂ ಅಬಾತ್ಮನೇ ರಸತನ್ಮಾತ್ರಾ ಪ್ರಕೃತ್ಯಾನಂದಾತ್ಮನೇ ಶ್ರೀಗುರುದೇವಾಯನಮಃ ಅಬಾತ್ಮಕಂ ನೈವೇದ್ಯಂ ಸಮರ್ಪಯಾಮಿ॥ ಸಂ ಸರ್ವಾತ್ಮನೇ ಸರ್ವತನ್ಮಾತ್ರಾ ಪ್ರಕೃತ್ಯಾನಂದಾತ್ಮನೇ ಶ್ರೀಗುರುದೇವಾಯನಮಃ ಸರ್ವಾತ್ಮಕಾನ್ ಸರ್ವೋಪಚಾರಾನ್ ಸಮರ್ಪಯಾಮಿ॥

॥ ಇತಿ ಮಾನಸಪೂಜಾ ॥

ಅಥ ಶ್ರೀಗುರು ಮೂಲಮಂತ್ರಃ ॥ ಓಂ ನಮಃ ಶ್ರೀಗುರುದೇವಾಯ ಪರಮ ಪುರುಷಾಯ ಸರ್ವದೇವತಾವಶೀಕರಾಯ ಸರ್ವಾರಿಷ್ಟ ವಿನಾಶಾಯ ಸರ್ವಮಂತ್ರ ಚ್ಛೇದನಾಯ ತ್ರೈಲೋಕ್ಯಂ ವಶಮಾನಯಸ್ವಾಹಾ ॥

ಓಂ ಅಸ್ಯ ಶ್ರೀಗುರುಗೀತಾಸ್ತೋತ್ರಮಾಲಾಮಂತ್ರಸ್ಯ । ಭಗವಾನ್ ಸದಾ ಶಿವೋಋಷಿಃ । ನಾನಾವಿಧಾನಿಛಂದಾಂಸಿ । ಶ್ರೀಗುರುಃ ಪರಮಾತ್ಮಾದೇವತಾ ॥ ಹಂ ಬೀಜಂ ಸಃಶಕ್ತಿಃ। ಸೋಽಹಂ ಕೀಲಕಂ। ಶ್ರೀ ಸಮಸ್ತಗುರುಮಂಡಲಸಿಧ್ಯರ್ಥೇ। ಜಪೇ ವಿನಿಯೋಗಃ ॥

॥ ಅಥಕರನ್ಯಾಸಃ ॥

ಓಂ ಹಂ ಸಾಂ ಸೂರ್ಯಾತ್ಮನೇ ಅಂಗುಷ್ಠಾಭ್ಯಾಂನಮಃ ।
ಓಂ ಹಂ ಸೀಂ ಸೋಮಾತ್ಮನೇ ತರ್ಜನೀಭ್ಯಾಂನಮಃ ।
ಓಂ ಹಂ ಸೂಂ ಆಗ್ನೇಯಾತ್ಮನೇ ಮಧ್ಯಮಾಭ್ಯಾಂನಮಃ ।
ಓಂ ಹಂ ಸೈಂ ನಿರಂಜನಾತ್ಮನೇ ಅನಾಮಿಕಾಭ್ಯಾಂನಮಃ ॥
ಓಂ ಹಂ ಸೌಂ ನಿರಾಭಾಸಾತ್ಮನೇ ಕನಿಷ್ಠಿಕಾಭ್ಯಾಂನಮಃ ॥
ಓಂ ಹಂ ಸಃ ಅವ್ಯಕ್ತಾತ್ಮನೇ ಅಂತಃಸೂಕ್ಷ್ಮಾತ್ಮನೇ ।
ಪ್ರಚೋದಯಾತ್ ಕರತಲಕರಪೃಷ್ಠಾಭ್ಯಾಂನಮಃ ॥

॥ ಇತಿ ಕರನ್ಯಾಸಃ ॥

॥ ಅಥಹೃದಯಾದಿನ್ಯಾಸಃ ॥

ಓಂ ಹಂ ಸಾಂ ಸೂರ್ಯಾತ್ಮನೇ ಹೃದಯಾಯನಮಃ ।
ಓಂ ಹಂ ಸೀಂ ಸೋಮಾತ್ಮನೇ ಶಿರಸೇಸ್ವಾಹಾ ।
ಓಂ ಹಂ ಸೂಂ ಆಗ್ನೇಯಾತ್ಮನೇ ಶಿಖಾಯೈವಷಟ್ ।
ಓಂ ಹಂ ಸೈಂ ನಿರಂಜನಾತ್ಮನೇ ಕವಚಾಯಹುಂ ।
ಓಂ ಹಂ ಸೌಂ ನಿರಾಭಾಸಾತ್ಮನೇ ನೇತ್ರತ್ರಯಾಯ ವೌಷಟ್ ।

ಓಂ ಹಂ ಸಃ ಅವ್ಯಕ್ತಾತ್ಮನೇ ಅಂತಃಸೂಕ್ಷ್ಮಾತ್ಮನೇ ಪ್ರಚೋದಯಾತ್ ಅಸ್ತ್ರಾಯಫಟ್ ಓಂ ಭೂರ್ಭುವಃ ಸುವರೋಂ ಇತಿದಿಗ್ಬಂಧಃ ॥

॥ ಅಥಧ್ಯಾನಂ ॥

ಹಂಸಾಭ್ಯಾಂ ಪರಿವೃತ್ತಪತ್ರಕಮಲೈರ್ದಿವ್ಯೈರ್ಜಗತ್ಕಾರಣಾಂ ।
ವಿಶ್ವೋತ್ಕೀರ್ಣಮನೇಕದೇಹನಿಲಯಂ ಸ್ವಚ್ಛಂದಮಾನಂದಕಂ ॥
ಆದ್ಯಂತ್ಯೈಕ ಮಖಂಡ ಚಿದ್ಘನರಸಂ ಭಾವೈಕದೀಪಾಂಕುರಂ ।
ಪ್ರತ್ಯಕ್ಷಾಕ್ಷರವಿಗ್ರಹಂ ಗುರುಪದಂ ಧ್ಯಾಯೇದ್ವಿಭುಂ ಶಾಶ್ವತಂ ॥ ೧ ॥
ವಿಶ್ವವ್ಯಾಪಿನ ಮಾದಿದೇವಮಮಲಂ ನಿತ್ಯಂಪರಂ ನಿಷ್ಕಲಂ ।
ನಿತ್ಯೋದ್ಬುದ್ಧ ಸಹಸ್ರಪತ್ರಕಮಲೇ ಲುಪ್ತಾಕ್ಷರೇ ಮಂಟಪೇ ॥
ನಿತ್ಯಾನಂದಮಯಂ ಸುಖೈಕನಿಲಯಂ ಸತ್ಯಂ ಶಿವಂ ಸುಂದರಂ ।
ಧ್ಯಾಯೇದ್ಧಂಸವರಂ ಪರಾತ್ಪರತರಂ ಸ್ವಚ್ಛಂದ ಸರ್ವಾಗಮಂ ॥ ೨ ॥
ಊರ್ಧ್ವಾಮ್ನಾಯ ಗುರೂಪದೇಶಭುವನಂ ತ್ರ್ಯೋಂಕಾರ ಸಿಂಹಾಸನಂ ।
ಸಿದ್ಧಾಚಾರ ಸಮಸ್ತವೇದಮಥನಂ ಷಟ್ಚಕ್ರಸಂಚಾರಿಣಾಂ ॥
ಅದ್ವೈತಂ ಶಿವಲಿಂಗಕಾಂತಮಮಲಂ ಪೂರ್ಣಪ್ರಭಾಶೋಭಿತಂ ।
ಶಾಂತಂ ಶ್ರೀಗುರುಪಾದುಕಂ ಭಜ ಮನಶ್ಚೈತನ್ಯಚಂದ್ರೋದಯಂ ॥ ೩ ॥
ಶ್ರೀನಾಥಾದಿ ಗುರುತ್ರಯಂ ಗಣಪತಿಂ ಪೀಠತ್ರಯಂ ಭೈರವೀಂ ।
ಸಿದ್ಧಾನಾಂ ವಟುಕತ್ರಯೀಪದಯುಗಂ ದ್ಯೂತಿಕ್ರಮಂಮಂಡಲಂ ॥
ವೀರಾದ್ಯಷ್ಟ ಚತುಷ್ಕಷಷ್ಟ ನವಪಂಚಾಚಾರ್ಯಕಂ ಪಂಚಕಂ ।
ಶ್ರೀಮನ್ಮಾಲಿನಿ ಮಂತ್ರರಾಜಸಹಿತಂ ವಂದೇ ಗುರೋರ್ಮಂಡಲಂ ॥ ೪ ॥
ಧ್ಯಾಯಾಮಿ ಸದ್ಗುರುಂ ಶಾಂತಂ । ಪ್ರತ್ಯಕ್ಷಂ ಶಿವರೂಪಿಣಂ ॥
ಶಿರಸಾ ಯೋಗಪೀಠಸ್ಥಂ । ಮುಕ್ತಿಕಾಮಾರ್ಥಸಿದ್ಧಯೇ ॥ ೫ ॥
ಪ್ರಾತಃ ಶಿರಸಿ ಶುಕ್ಲಾಬ್ಜೇ । ದ್ವಿನೇತ್ರಂ ದ್ವಿಭುಜಂ ಗುರುಂ ।
ವರಾಭಯಕರಂ ಶಾಂತಂ । ಸ್ಮರೇತ್ತನ್ನಾಮಪೂರ್ವಕಂ ॥ ೬ ॥
ಪ್ರಸನ್ನವದನಾಕ್ಷಂಚ । ಸರ್ವದೇವಸ್ವರೂಪಿಣಂ ।
ತತ್ಪಾದೋದಕ ಜಾಂಧಾರಾಂ । ನಿಪತಂತೀಂ ಸ್ವಮೂರ್ಧನಿ ॥ ೭ ॥
ತಯಾಸಂಕ್ಷಾಲಯೇದ್ದೇಹೀ । ಹ್ಯಂತರ್ಬಾಹ್ಯಗತಂಮಲಂ ।

ತತ್ಕ್ಷಣಾದ್ವಿರಜೋಮಂತ್ರೀ । ಜಾಯತೇಸ್ಫಟಿಕೋಪಮಃ ॥
ತೀರ್ಥಾನಿ ದಕ್ಷಿಣೇಪಾದೇ । ವೇದಾಸ್ತನ್ಮುಖಮಾಶ್ರಿತಾಃ ।
ಪೂಜಯೇದರ್ಚಿತಂ ತಂತು । ತದಭಿಧ್ಯಾನಪೂರ್ವಕಂ ॥ ೯ ॥
ಸಹಸ್ರದಳಪಂಕಜೇ ಸಕಲಶೀತರಶ್ಮಿಪ್ರಭಂ ।
ವರಾಭಯಕರಾಂಬುಜಂ ವಿಮಲಗಂಧ ಪುಷ್ಪಾಂಬರಂ ॥
ಪ್ರಸನ್ನವದನೇಕ್ಷಣಂ ಸಕಲದೇವತಾರೂಪಿಣಂ ।
ಸ್ಮರೇಚ್ಛಿರಸಿಹಂಸ ಗಂ ತದಭಿಧಾನಪೂರ್ವಂ ಗುರುಂ ॥ ೧೦ ॥

" ಇತಿಧ್ಯಾನಂ "

" ಗುರುಗೀತಾ " ॥ ಶ್ರೀ ಗುರುಭ್ಯೋನಮಃ ॥

॥ ಶ್ರೀ ಗಣೇಶ ಶಾರದಾ ಸದ್ಗುರುಮಂಗಳಮೂರ್ತಿಭ್ಯೋನಮಃ ॥

ಯಂಬ್ರಹ್ಮವೇದಾಂತ ವಿದೋವದಂತಿ ।
ಪರಂಪ್ರಧಾನಂ ಪುರುಷಂ ತಥಾನ್ಯೇ ॥
ವಿಶ್ವೋದ್ಗತೇಃ ಕಾರಣಮೀಶ್ವರಂವಾ ।
ತಸ್ಮೈನಮೋವಿಘ್ನ ನಿವಾರಣಾಯ ॥

ಶ್ರೀಗಣೇಶ ನಮಸ್ತುಭ್ಯಂ । ಸರ್ವವಿದ್ಯಾಪ್ರದಾಯಕ ॥
ಕಾರ್ಯಾರಂಭೇಷು ಪೂಜ್ಯಸ್ತ್ವಂ । ಸರ್ವವಿಘ್ನನಿವಾರಣ ॥ ೧ ॥
ಶ್ರೀವಾಣೀ ನಿತ್ಯಕಲ್ಯಾಣೀ । ಶರಣಾಗತಪೋಷಿಣೀ ।
ಬ್ರಹ್ಮಪತ್ನೀ ಕೀರಪಾಣಿ । ಮರ್ದಾತ್ಮಾಬುದ್ಧಿದಾಯಿನೀ ॥ ೨ ॥
ಅಚಿಂತ್ಯಾವ್ಯಕ್ತರೂಪಾಯ । ನಿರ್ಗುಣಾಯ ಗುಣಾತ್ಮನೇ ।
ಸಮಸ್ತ ಜಗದಾಧಾರ । ಮೂರ್ತಯೇ ಬ್ರಹ್ಮಣೇನಮಃ ॥ ೩ ॥
ಯದಜ್ಞಾನ ಪ್ರಭಾವೇನ । ದೃಶ್ಯತೇ ಸಕಲಂಜಗತ್ ।
ಯದ್ಜ್ಞಾನಾತ್ಕ್ಷಯ ಮಾಪ್ನೋತಿ । ತಸ್ಮೈ ಜ್ಞಾನಾತ್ಮನೇನಮಃ ॥ ೪ ॥

|| ಋಷಯಊಚುಃ ||

ಗುಹ್ಯಾದ್ಗುಹ್ಯತರಂಸಾರಂ । ಗುರುಗೀತಾ ವಿಶೇಷತಃ ।
ತವ ಪ್ರಸಾದಾಚ್ಛ್ರೋತವ್ಯಾ । ತತ್ಸರ್ವಂಬ್ರೂಹಿ ಸೂತನಃ || ೫ ||

|| ಸೂತಉವಾಚ ||

ಕೈಲಾಸಶಿಖರೇರಮ್ಯೇ । ಭಕ್ತಿಸಾಧನಹೇತವೇ ||
ಪ್ರಣಮ್ಯ ಪಾರ್ವತೀ ಭಕ್ತ್ಯಾ । ಶಂಕರಂ ಪರಿಪೃಚ್ಛತಿ || ೬ ||

|| ಪಾರ್ವತ್ಯುವಾಚ ||

ಓಂನಮೋ ದೇವದೇವೇಶ । ಪರಾತ್ಪರ ! ಜಗದ್ಗುರೋ ! ||
ಸದಾಶಿವ ! ಮಹಾದೇವ ! । ಗುರುದೀಕ್ಷಾಂ ಪ್ರದೇಹಿಮೇ || ೭ ||
ಭಗವನ್ ! ಸರ್ವಧರ್ಮಜ್ಞ ! । ವ್ರತಾನಾಂ ವ್ರತನಾಯಕ ! ||
ಬ್ರೂಹಿಮೇಕೃಪಯಾಶಂಭೋ । ಗುರುಮಾಹಾತ್ಮ್ಯಮುತ್ತಮಂ || ೮ ||
ಕೇನ ಮಾರ್ಗೇಣ ಭೋಸ್ವಾಮಿನ್ । ದೇಹೀಬ್ರಹ್ಮಮಯೋಭವೇತ್ ||
ತತ್ಕೃಪಾಂ ಕುರುಮೇಸ್ವಾಮಿನ್ । ನಮಾಮಿಚರಣೌತವ || ೯ ||

" ಈಶ್ವರ ಉವಾಚ "

ಯಸ್ಯ ದೇವೇ ಪರಾಭಕ್ತಿ । ರ್ಯಥಾದೇವೇತಥಾಗುರೌ ||
ತಸ್ಯೈತೇ ಕಥಿತಾಹ್ಯರ್ಥಾಃ । ಪ್ರಕಾಶಂತೇ ಮಹಾತ್ಮನಃ || ೧೦ ||
ಮಮರೂಪಾಸಿ ದೇವಿ ತ್ವಂ । ತ್ವದ್ಭಕ್ತ್ಯರ್ಥಂ ವದಾಮ್ಯಹಂ ||
ಲೋಕೋಪಕಾರಕಃ ಪ್ರಶ್ನೋ । ನಕೇನಾಪಿಕೃತಃ ಪುರಾ || ೧೧ ||
ಯೋಗುರುಃ ಸ ಶಿವಃ ಪ್ರೋಕ್ತೋ । ಯಃಶಿವಃ ಸ ಗುರುಃಸ್ಮೃತಃ ||
ಗುರೌವಿಕಲ್ಪಂ ಯಸ್ತುಕುರ್ವೀತ । ಸನರೋ ಗುರುತಲ್ಪಗ || ೧೨
ದುರ್ಲಭಂ ತ್ರಿಷುಲೋಕೇಷು । ತಚ್ಛೃಣುಷ್ವ ವದಾಮ್ಯಹಂ ||
ಗುರುಬ್ರಹ್ಮ ವಿನಾ ನಾನ್ಯತ್ । ಸತ್ಯಂಸತ್ಯಂ ವರಾನನೇ || ೧೩ ||
ವೇದಶಾಸ್ತ್ರಪುರಾಣಾನಿ । [illegible] ||

ಮಂತ್ರಯಂತ್ರಾದಿ ವಿದ್ಯಾಶ್ಚ । ಸ್ಮೃತಿರುಚ್ಚಾಟನಾದಿಕಂ ॥ ೧೪ ॥
ಶೈವಶಾಕ್ತಾಗಮಾದೀನಿ । ಚಾನ್ಯಾನಿ ವಿವಿಧಾನಿಚ ॥
ಅಪಭ್ರಂಶಃ ಸಮಸ್ತಾನಾಂ । ಜೀವಾನಾಂ ಭ್ರಾಂತಚೇತಸಾಂ ॥ ೧೫ ॥
ಯಜ್ಞಂವ್ರತಂ ತಪೋದಾನಂ । ಜಪಂತೀರ್ಥಂ ತಥೈವಚ ॥
ಗುರುತತ್ವಮವಿಜ್ಞಾತಾ । ಮೂಢಾಸ್ತ್ವನ್ಯರತಾನರಾಃ ॥ ೧೬ ॥
ಗುರುಂ ವಿದ್ಯಾಕ್ಯಾತ್ಮನೋನಾನ್ಯತ್ । ಸತ್ಯಂಸತ್ಯಂ ನಸಂಶಯಃ ॥
ತಲ್ಲಾಭಾರ್ಥಂ ಪ್ರಯತ್ನಸ್ತು । ಕರ್ತವ್ಯೋಹಿಮನೀಷಿಭಿಃ ॥ ೧೭ ॥
ಗೂಢಾವಿದ್ಯಾ ಜಗನ್ಮಾಯಾ । ದೇಹಮಜ್ಞಾನ ಸಂಭವಂ ॥
ವಿಜ್ಞಾನಂ ಯತ್ಪ್ರಸಾದೇನ । ಗುರುಶಬ್ದೇನ ಕಥ್ಯತೇ ॥ ೧೮ ॥
ಯದಂಘ್ರಿಕ ಮಲದ್ವಂದ್ವಂ । ದ್ವಂದ್ವತಾಪನಿವಾರಕಂ ॥
ತಾರಕಂ ಭವಸಿಂಧೋಶ್ಚ । ಶ್ರೀಗುರುಂ ಪ್ರಣಮಾಮ್ಯಹಂ ॥ ೧೯ ॥
ದೇಹೀ ಬ್ರಹ್ಮಭವೇದ್ಯಸ್ಮಾತ್ । ತತ್ಕೃಪಾರ್ಥಂವದಾಮಿತೇ ।
ಸರ್ವಪಾಪವಿಶುದ್ಧಾತ್ಮಾ । ಶ್ರೀಗುರೋಃ ಪಾದಸೇವನಾತ್ ॥ ೨೦ ॥
ಸರ್ವತೀರ್ಥಾವಗಾಹಸ್ಯ । ಸಂಪ್ರಾಪ್ನೋತಿ ಫಲಂನರಃ ॥
ಗುರುಪಾದಾಂಬುಜಂಸ್ಮೃತ್ವಾ । ಜಲಂ ಶಿರಸಿ ಧಾರಯೇತ್ ॥ ೨೧ ॥
ಶೋಷಣಂ ಪಾಪಪಂಕಸ್ಯ । ದೀಪನಂ ಜ್ಞಾನತೇಜಸಾಂ ॥
ಗುರುಪಾದೋದಕಂಪೀತ್ವಾ । ಸಂಸಾರಾಬ್ಧಿಂ ತರೇದ್ಬುಧಃ ॥ ೨೨ ॥
ಅಜ್ಞಾನಮೂಲಹರಣಂ । ಜನ್ಮಕರ್ಮನಿವಾರಣಂ ॥
ಜ್ಞಾನವೈರಾಗ್ಯಸಿದ್ಧ್ಯರ್ಥಂ । ಗುರೋಃಪಾದೋದಕಂಪಿಬೇತ್ ॥ ೨೩ ॥
ಗುರುಪಾದೋದಕಂ ಪೇಯಂ । ಗುರೋರುಚ್ಛಿಷ್ಟಭೋಜನಂ ॥
ಗುರುಮೂರ್ತಿಂಸದಾಧ್ಯಾಯೇತ್ । ಗುರುಮಂತ್ರಂ ಸದಾಜಪೇತ್ ॥೨೪॥
ಸ್ವದೇಶಿಕಸ್ಯೈವಶರೀರಚಿಂತನಂ । ಭವೇದನಂತಸ್ಯಶಿವಸ್ಯ ಚಿಂತನಂ ॥
ಸ್ವದೇಶಿಕಸ್ಯೈವಚನಾಮಕೀರ್ತನಂ ।
ಭವೇದನಂತಸ್ಯಶಿವಸ್ಯಕೀರ್ತನಂ ॥ ೨೫ ॥
ಯತ್ಪಾದರೇಣುಕೋನಿತ್ಯಂ । ಕೋಪಿ ಸಂಸಾರವಾರಿಧೇಃ ।
ಸೇತುಬಂಧಾಯತೇ ನಾಥ । ದೇಶಿಕಂ ತಮುಪಾಸ್ಮಹೇ ॥ ೨೬ ॥

ಯಸ್ಮಾದನುಗ್ರಹಂ ಲಬ್ಧ್ವಾ । ಮಹದಜ್ಞಾನ ಮುತ್ಸೃಜೇತ್ ॥
ತಸ್ಮೈಶ್ರೀ ದೇಶಿಕೇಂದ್ರಾಯ । ನಮಶ್ಚಾಭೀಷ್ಟಸಿದ್ಧಯೇ ॥ ೨೭ ॥
ಕಾಶೀಕ್ಷೇತ್ರನಿವಾಸಶ್ಚ । ಜಾಹ್ನವೀಚರಣೋದಕಂ ॥
ಗುರುರ್ವಿಶ್ವೇಶ್ವರಃಸಾಕ್ಷಾತ್ । ತಾರಕಂಬ್ರಹ್ಮನಿಶ್ಚಿತಂ ॥ ೨೮ ॥
ಶಿರಃಪಾದಾಂಕಿತಂಭೂತ್ವಾ । ಗಯಾಸ್ತೇಚಾಕ್ಷಯೋವಟಃ ॥
ತೀರ್ಥರಾಜಃಪ್ರಯಾಗೋಽಸೌ । ಗುರುಮೂರ್ತಿರ್ನಸಂಶಯಃ ॥ ೨೯ ॥
ಗುರುಮೂರ್ತಿಂ ಸ್ಮರೇನ್ನಿತ್ಯಂ ಗುರೋರ್ನಾಮ ಸದಾಜಪೇತ್ ॥
ಗುರೋರ್ವಿರಾಜ್ಞಾಂ ಪ್ರಕುತ । ಗುರೋರನ್ಯನ್ನ ಭಾವಯೇತ್ ॥ ೩೦ ॥
ಗುರುವಕ್ತ್ರೇಸ್ಥಿತಂಬ್ರಹ್ಮ । ಪ್ರಾಪ್ಯತೇತತ್ಪ್ರಸಾದತಃ ॥
ಗುರುಮೂರ್ತಿಂ ಸದಾ ಧ್ಯಾಯೇತ್ । ಯಥಾ ಯೋಷಿಚ್ಚ ಪುಂಶ್ಚಲೀ॥೩೧॥
ಸ್ವಾಶ್ರಮಂಚಸ್ವಜಾತಿಂಚ । ಸ್ವಕೀರ್ತಿಂ ಪುಷ್ಟಿವರ್ಧನಂ ॥
ಅನ್ಯತ್ಸರ್ವಂ ಪರಿತ್ಯಜ್ಯ । ಗುರೋರನ್ಯನ್ನ ಭಾವಯೇತ್ ॥ ೩೨ ॥
ಅನನ್ಯಾಶ್ಚಿಂತಯಂತೋ ಮಾಂ । ಸುಲಭಂ ಪರಮಂ ಪದಂ ॥
ತಸ್ಮಾತ್ಸರ್ವಪ್ರಯತ್ನೇನ । ಗುರೋರಾರಾಧನಂಕುರು ॥ ೩೩ ॥
ಗುರುವಕ್ತ್ರೇಸ್ಥಿತಾ ವಿದ್ಯಾ । ಗುರುಭಕ್ತ್ಯಾಚ ಲಭ್ಯತೇ ॥
ತ್ರೈಲೋಕ್ಯಸ್ಫುಟವಕ್ತಾರೋ । ದೇವಾದ್ಯಸ್ಸುರಪನ್ನಗಾಃ ॥ ೩೪ ॥
ಗುಕಾರಸ್ತ್ವಂಧಕಾರೋಹಿ । ರುಕಾರಸ್ತೇಜ ಉಚ್ಯತೇ ॥
ಅಜ್ಞಾನಗ್ರಾಸಕಂ ಬ್ರಹ್ಮ । ಗುರುರೇವ ನ ಸಂಶಯಃ ॥ ೩೫ ॥
ಗುಕಾರಶ್ಚ ಗುಣಾತೀತೋ । ರೂಪಾತೀತೋ ರುಕಾರಕಃ ॥
ಗುಣಾತೀತಮರೂಪಂಚ । ಯೋದದ್ಯಾತ್ ಸಗುರುಃಸ್ಮೃತಃ ॥ ೩೬ ॥
ಗುಕಾರಃ ಪ್ರಥಮೋ ವರ್ಣೋ । ಮಾಯಾಗುಣ ಸಮಾಶ್ರಿತಃ ॥
ರುಕಾರಶ್ಚಾದ್ವಯಂಬ್ರಹ್ಮ । ಮಾಯಾಭ್ರಾಂತಿವಿಮೋಚಕಃ ॥ ೩೭ ॥
ಏವಂ ಗುರುಪದಂ ಶ್ರೇಷ್ಠಂ । ದೇವಾನಾಮಪಿದುರ್ಲಭಂ ॥
ಹಾಹಾಹೂಹೂ ಗಣೈಶ್ಚೈವ । ಗಂಧರ್ವಾದ್ಯೈಶ್ಚಪೂಜ್ಯತೇ ॥ ೩೮ ॥
ಧ್ರುವಂ ಸುರಾಣಾಂ ಸರ್ವೇಷಾಂ । ನಾಸ್ತಿತತ್ವಂ ಗುರೋಃ ಪರಂ ॥
ಗುರೋರಾಧನಂ ಕಾರ್ಯಂ । ಸರ್ವಸ್ವಂಚನಿವೇದಯೇತ್ ॥ ೩೯ ॥
ಆಸನಂ ಶಯನಂ ವಸ್ತ್ರಂ । ವಾಹನಂ ಭೂಷಣಾದಿಕಂ ॥

ಸಾಧಕೇನ ಪ್ರದಾತವ್ಯಂ । ಗುರುಸಂತೋಷಕಾರಣಂ ॥ ೪೦ ॥
ಕರ್ಮಣಾ ಮನಸಾ ವಾಚಾ । ನಿತ್ಯಮಾರಾಧಯೇದ್ಗುರುಂ ॥
ದೀರ್ಘದಂಡಂ ನಮಸ್ಕೃತ್ಯ । ನಿರ್ಲಜ್ಜೋ ಗುರುಸನ್ನಿಧೌ ॥ ೪೧ ॥
ಶರೀರಮಿಂದ್ರಿಯಂ ಪ್ರಾಣ । ಮರ್ಥಂ ಸ್ವಜನಬಾಂಧವಾನ್ ॥
ಆತ್ಮಗೇಹಾದಿಕಂ ಸರ್ವಂ । ಸದ್ಗುರುಭ್ಯೋನಿವೇದಯೇತ್ ॥ ೪೨ ॥
ಕ್ರಿಮಿಕೀಟೈರ್ಭಸ್ಮವಿಷ್ಠಾ । ದುರ್ಗಂಧಮಲಮೂತ್ರಕೈಃ ॥
ಶ್ಲೇಷ್ಮರಕ್ತತ್ವಚಾಮಾಂಸೈ । ರ್ನದ್ಧಂ ದೇಹಂ ವರಾನನೇ ॥ ೪೩ ॥
ಸಂಸಾರವೃಕ್ಷಮಾರೂಢಾಃ । ಪತಂತಿ ನರಕಾರ್ಣವೇ ॥
ಯೇನಚೋದ್ಧಾರಿತಾಃ ಸರ್ವೇ । ತಸ್ಮೈಶ್ರೀ ಗುರವೇ ನಮಃ ॥ ೪೪ ॥
ಗುರುರ್ಬ್ರಹ್ಮಾ ಗುರುರ್ವಿಷ್ಣುಃ । ಗುರುದೇವೋ ಮಹೇಶ್ವರಃ ॥
ಗುರುಃಸಾಕ್ಷಾತ್ಪರಬ್ರಹ್ಮ । ತಸ್ಮೈಶ್ರೀ ಗುರವೇನಮಃ ॥ ೪೫ ॥
ಹೇತವೇ ಸರ್ವಜಗತಾಂ । ಸಂಸಾರಾರ್ಣವಸೇತವೇ ॥
ಪ್ರಭವೇ ಸರ್ವವಿದ್ಯಾನಾಂ । ತಸ್ಮೈಶ್ರೀ ಗುರವೇ ನಮಃ ॥ ೪೬ ॥
ಶಿಷ್ಯಹೃದ್ಧ್ವಾಂತವಿಧ್ವಂಸ । ಭಾನವೇಕಾಮಧೇನವೇ ॥
ಸದಂತೇವಾಸಿನಾಂಕಲ್ಪ । ತರವೇ ಗುರವೇ ನಮಃ ॥ ೪೭ ॥
ಅಜ್ಞಾನತಿಮಿರಾಂಧಸ್ಯ । ಜ್ಞಾನಾಂಜನಶಲಾಕಯಾ ॥
ಚಕ್ಷುರುನ್ಮೀಲಿತಂ ಯೇನ । ತಸ್ಮೈಶ್ರೀ ಗುರವೇನಮಃ ॥ ೪೮ ॥
ಅಖಂಡಮಂಡಲಾಕಾರಂ । ವ್ಯಾಪ್ತಂ ಯೇನ ಚರಾಚರಂ ॥
ತತ್ಪದಂ ದರ್ಶಿತಂ ಯೇನ ತಸ್ಮೈಶ್ರೀ ಗುರವೇ ನಮಃ ॥ ೪೯ ॥
ಸ್ಥಾವರಂಜಂಗಮಂಚೈವ । ಯತ್ಕಿಂಚಿತ್ಸಚರಾಚರಂ ॥
ತ್ವಂಪದಂ ದರ್ಶಿತಂಯೇನ । ತಸ್ಮೈಶ್ರೀ ಗುರವೇನಮಃ ॥ ೫೦ ॥
ಸಚ್ಚಿನ್ಮಯಂ ಸದಾಪೂರ್ಣಂ । ಸಚ್ಚಿದಾನಂದ ವಿಗ್ರಹಂ ॥
ಅಸಿತ್ವಂದರ್ಶಿತಂ ಯೇನ । ತಸ್ಮೈಶ್ರೀ ಗುರವೇ ನಮಃ ॥ ೫೧ ॥
ಸರ್ವಶ್ರುತಿ ಶಿರೋರತ್ನ । ವಿರಾಜಿತಪದಾಂಬುಜ ॥
ವೇದಾಂತಾಂಬುಜ ಸೂರ್ಯಾಯ । ತಸ್ಮೈಶ್ರೀ ಗುರವೇನಮಃ ॥ ೫೨ ॥
ಗುರುರೇಕೋ ಜಗತ್ಸರ್ವಂ । ಬ್ರಹ್ಮವಿಷ್ಣುಶಿವಾತ್ಮಕಂ ॥
ಗುರೋಃ ಪರತರಂ ನಾಸ್ತಿ । ತಸ್ಮೈಶ್ರೀ ಗುರವೇ ನಮಃ ॥ ೫೩ ॥

ಚೈತನ್ಯಂ ಶಾಶ್ವತಂ ಶಾಂತಂ ವ್ಯೋಮಾತೀತಂ । ನಿರಂಜನಂ ॥
ನಾದಬಿಂದು ಕಲಾತೀತಂ । ತಸ್ಮೈಶ್ರೀ ಗುರವೇನಮಃ ॥ ೫೪ ॥
ನಿಮಿಷಾರ್ಧಾರ್ಧಪಾತಾದ್ವಾ । ಯದ್ವಾಕ್ಯಾದ್ವೈ ವಿಮೋಕ್ಯತೇ ॥
ಸ್ವಾತ್ಮಾನಂ ಶಿವಮಾದತ್ತೇ । ತಸ್ಮೈ ಶ್ರೀಗುರವೇನಮಃ ॥ ೫೫ ॥
ಸ್ಥಾವರಂ ಜ್ಞಚರಂ ಶಾಂತಂ । ಜಂಗಮಂ ಚರಮೇವಚ ॥
ವ್ಯಾಪ್ತಂಯೇನ ಜಗತ್ಸರ್ವಂ । ತಸ್ಮೈ ಶ್ರೀ ಗುರವೇನಮಃ ॥ ೫೬ ॥
ಅನೇಕಜನ್ಮ ಸಂಪ್ರಾಪ್ತ । ಕರ್ಮಧರ್ಮವಿದಾಹಿನೇ ॥
ಜ್ಞಾನಬೋಧ ಪ್ರಭಾವೇನ । ತಸ್ಮೈಶ್ರೀ ಗುರವೇನಮಃ ॥ ೫೭ ॥
ಜ್ಞಾನಶಕ್ತಿ ಸಮಾರೂಢ । ತತ್ವಮಾಲಾ ವಿಭೂಷಿತ ॥
ಭುಕ್ತಿಮುಕ್ತಿ ಪ್ರದಾತ್ರೇಚ । ತಸ್ಮೈಶ್ರೀ ಗುರವೇನಮಃ ॥ ೫೮ ॥
ನಗುರೋರಧಿಕಂ ತತ್ವಂ । ನಗುರೋರಧಿಕಂ ತಪಃ ॥
ತತ್ವ ಜ್ಞಾನಾತ್ಪರಂನಾಸ್ತಿ । ತಸ್ಮೈಶ್ರೀ ಗುರವೇನಮಃ ॥ ೫೯ ॥
ಮನ್ನಾಥಃ ಶ್ರೀಜಗನ್ನಾಥೋ । ಮದ್ಗುರುಃ ಶ್ರೀಜಗದ್ಗುರುಃ ॥
ಮಮಾತ್ಮಾ ಸರ್ವಭೂತಾತ್ಮಾ । ತಸ್ಮೈಶ್ರೀ ಗುರವೇನಮಃ ॥ ೬೦ ॥
ನಿರ್ಗುಣಂ ನಿರ್ಮಮಂ ಶಾಂತಂ । ಜಂಗಮಂ ಸ್ಥಿರಮೇವಚ ॥
ವ್ಯಾಪ್ತಂಯೇನ ಜಗತ್ಸರ್ವಂ । ತಸ್ಮೈಶ್ರೀ ಗುರವೇನಮಃ ॥ ೬೧ ॥
ತ್ವಂ ಪಿತಾತ್ವಂಚ ಮೇಮಾತಾ । ತ್ವಂಬಂಧುಸ್ತ್ವಂಚ ದೇವತಾ ॥
ಸಂಸಾರ ಮೋಹಭಂಗಾಯ । ತಸ್ಮೈಶ್ರೀ ಗುರವೇನಮಃ ॥ ೬೨ ॥
ಯತ್ಸತ್ವೇನ ಜಗತ್ಸತ್ವಂ । ಯತ್ಪ್ರಕಾಶೇನ ಭಾತಿಯತ್ ॥
ಯದಾನಂದೇನ ನಂದಂತಿ । ತಸ್ಮೈಶ್ರೀ ಗುರವೇನಮಃ ॥ ೬೩ ॥
ಯಸ್ಮಿನ್ ಸ್ಥಿತಮಿದಂ ವಿಶ್ವಂ । ಭಾತಿ ಯದ್ಭಾನರೂಪತಃ ॥
ಯತ್ಪ್ರೀತ್ಯಾ ಪ್ರಿಯಪುತ್ರಾದಿ । ತಸ್ಮೈಶ್ರೀ ಗುರವೇನಮಃ ॥ ೬೪ ॥
ಯೇನ ಚೇತಯತಾ ಹೀದಂ । ಚಿತ್ತಂ ಚೇತಯತೇನರಃ ॥
ಜಾಗ್ರತ್ ಸ್ವಪ್ನಸುಷುಪ್ತ್ಯಾದಿ । ತಸ್ಮೈಶ್ರೀ ಗುರವೇನಮಃ ॥ ೬೫ ॥
ಯಸ್ಯ ದೃಶ್ಯಮಿದಂ ವಿಶ್ವಂ । ನದೃಶ್ಯಂ ಭಿನ್ನ ಭೇದತಃ ॥
ತದೇಕರೂಪ ರೂಪಾಯ । ತಸ್ಮೈಶ್ರೀ ಗುರವೇನಮಃ ॥ ೬೬ ॥

ಯಸ್ಯಾಜ್ಞಾತಂ ಮತಂ ತಸ್ಯ । ಮತಂಯಸ್ಯ ನವೇದಸಃ ॥
ಅನನ್ಯ ಭಾವಭಾವಾಯ । ತಸ್ಮೈಶ್ರೀ ಗುರವೇ ನಮಃ ॥ ೬೭ ॥
ನಾನಾರೂಪಮಿದಂ ವಿಶ್ವಂ । ನಕೇನಾಪ್ಯಸ್ತಿ ಭಿನ್ನತಾ ॥
ಕಾರ್ಯಕಾರಣರೂಪಾಯ । ತಸ್ಮೈಶ್ರೀ ಗುರವೇ ನಮಃ ॥ ೬೮ ॥
ಯಸ್ಮೈ ಕಾರಣರೂಪಾಯ । ಕಾರ್ಯರೂಪೇಣ ಭಾತಿಯತ್ ॥
ಕಾರ್ಯಕಾರಣರೂಪಾಯ । ತಸ್ಮೈಶ್ರೀ ಗುರವೇನಮಃ ॥ ೬೯ ॥
ಗುರುರಾದಿ ರನಾದಿಶ್ಚ । ಗುರುಃ ಪರಮದೈವತಂ ॥
ಗುರುಮಂತ್ರ ಸಮೋನಾಸ್ತಿ । ತಸ್ಮೈಶ್ರೀ ಗುರವೇನಮಃ ॥ ೭೦ ॥
ಏಕಏವ ಪರೋಬಂಧು । ರ್ವಿಷಮೇ ಸಮುಪಸ್ಥಿತೇ ॥
ಗುರುಃ ಸಕಲಧರ್ಮಾತ್ಮಾ । ತಸ್ಮೈಶ್ರೀ ಗುರವೇನಮಃ ॥ ೭೧ ॥
ಗುರುಮಧ್ಯೇಸ್ಥಿತಂ ವಿಶ್ವಂ । ವಿಶ್ವಮಧ್ಯೇಸ್ಥಿತೋ ಗುರುಃ ॥
ಗುರುರ್ವಿಶ್ವಂ ನಮಸ್ತೇಸ್ತು । ತಸ್ಮೈಶ್ರೀ ಗುರವೇನಮಃ ॥ ೭೨ ॥
ಭವಾರಣ್ಯ ಪ್ರವಿಷ್ಟಸ್ಯ । ದಿಙ್ಮೋಹ ಭ್ರಾಂತಚೇತಸಃ ॥
ಯೇನ ಸಂದರ್ಶಿತಃ ಪಂಥಾ । ಸ್ತಸ್ಮೈಶ್ರೀ ಗುರವೇ ನಮಃ ॥ ೭೩ ॥
ತಾಪತ್ರಯಾಗ್ನಿ ತಪ್ತಾನಾ । ಮಶಾಂತ ಪ್ರಾಣಿನಾಂ ಶಿವೇ ॥
ಗುರುರೇವ ಪರಾಗಂಗಾ । ತಸ್ಮೈಶ್ರೀ ಗುರವೇ ನಮಃ ॥ ೭೪ ॥
ಗುರುರಾದಿರನಾದಿಶ್ಚ । ಗುರುಃ ಪರಮದೈವತಂ ॥
ಗುರೋಃ ಸಮಾನಂ ನಾನ್ಯಶ್ಚ । ತಸ್ಮೈಶ್ರೀ ಗುರವೇ ನಮಃ ॥ ೭೫ ॥
ಅಜ್ಞಾನೇನಾ ಹಿನಾಗ್ರಸ್ತಾಃ । ಪ್ರಾಣಿನಸ್ತಾನ್ ಚಿಕಿತ್ಸಕಃ ॥
ವಿದ್ಯಾ ಸ್ವರೂಪೋಭಗವಾನ್ । ತಸ್ಮೈಶ್ರೀ ಗುರವೇ ನಮಃ ॥ ೭೬ ॥
ಧ್ಯಾನಮೂಲಾ ಗುರೋರ್ಮೂರ್ತಿಃ । ಪೂಜಾಮೂಲಂ ಗುರೋಃಪದಂ ॥
ಮಂತ್ರಮೂಲಂ ಗುರೋರ್ವಾಕ್ಯಂ । ಮುಕ್ತಿಮೂಲಾ ಗುರೋಃ ಕೃಪಾ॥೭೭
ಯತ್ಕಟಾಕ್ಷ ಮಹಾಮೇರು । ಮಹಮಾಶ್ರಿತ್ಯ ನಿತ್ಯಶಃ ॥
ಸುಖಿತೋಸ್ಮಿ ಕೃತಾರ್ಥೋಸ್ಮಿ । ಗುರುನಾಥಂ ತಮಾಶ್ರಯೇ ॥ ೭೮ ॥
ಹರಣಂ ಭವರೋಗಾಣಾಂ । ಕರಣಂ ಸರ್ವಸಂಪದಾಂ ॥
ಭರಣಂ ಶ್ರೀಗುರೋರ್ನಿತ್ಯಂ । ಚರಣಂ ಶರಣಂ ವ್ರಜೇತ್ ॥ ೭೯ ॥
ಅನವಚ್ಛಿನ್ನ ಚಿದ್ರೂಪ । ಚಿದಾನಂದಾತ್ಮ ವಸ್ತವೇ ॥
ನಮಸ್ಕಾರ ತಿರಸ್ಕಾರ । ಕಥಂದೇವ ಕರೋಮ್ಯಹಂ ॥ ೮೦ ॥

ನಿತ್ಯಾಯ ನಿರ್ವಿಕಲ್ಪಾಯ । ನಿರವದ್ಯಾಯ ಯೋಗಿನೇ ॥
ನಿಷ್ಕಳಾಯ ನಿರೀಹಾಯ । ಶಿವಾಯ ಗುರವೇನುಃ ॥ ೮೧ ॥
ಶಿಷ್ಯಹೃತ್ಪದ್ಮ ಸೂರ್ಯಾಯ । ಬೋಧಕ ಜ್ಞಾನರೂಪಿಣೇ ॥
ವೇದಾಂತ ತತ್ವವೇದ್ಯಾಯ । ಶಿವಾಯ ಗುರವೇನಮಃ ॥ ೮೨ ॥
ಉಪಾಯೋಪೇಯರೂಪಾಯ । ತದುಪಾಯ ಪ್ರವರ್ತಿನೇ ॥
ಅನಿರ್ವಾಚ್ಯಾಯ ವಾಚ್ಯಾಯ । ಶಿವಾಯ ಗುರವೇ ನಮಃ ॥ ೮೩ ॥
ಕಾರ್ಯ ಕಾರಣರೂಪಾಯ । ರೂಪಾ ರೂಪಾಯತೇ ಸದಾ ॥
ಅಪ್ರಮೇಯ ಸ್ವರೂಪಾಯ । ಶಿವಾಯ ಗುರವೇ ನಮಃ ॥ ೮೪ ॥
ಗುಣಾಧಾರಾಯ ಗುಣಿನೇ । ಗುಣವರ್ಜಿತರೂಪಿಣೇ ॥
ಜನ್ಮಿನೇ ಜನ್ಮಹೀನಾಯ । ಶಿವಾಯ ಗುರವೇನಮಃ ॥ ೮೫ ॥
ಸ್ವತೇಜೋ ಜಾತವಿಶ್ವಾಯ । ಭಿನ್ನಾಭಿನ್ನ ಸ್ವರೂಪಿಣೇ ॥
ಭಿನ್ನ ಸಂಸಾರ ವೃಕ್ಷಾಯ । ಶಿವಾಯ ಗುರವೇ ನಮಃ ॥ ೮೬ ॥
ಅನಾದ್ಯಾಯಾಖಿಲಾದ್ಯಾಯ । ಮಾಯಿನೇ ಗತಮಾಯಿನೇ ॥
ಅರೂಪಾಯ ಸರೂಪಾಯ । ಶಿವಾಯ ಗುರವೇ ನಮಃ ॥ ೮೭ ॥
ಸರ್ವಮಂತ್ರ ಸ್ವರೂಪಾಯ । ಸರ್ವತಂತ್ರ ಸ್ವರೂಪಿಣೇ ॥
ಸರ್ವಗಾಯ ಸಮಸ್ತಾಯ । ಶಿವಾಯ ಗುರವೇ ನಮಃ ॥ ೮೮ ॥
ವರಪ್ರಸಾದ ಮಂತ್ರೋದ್ಯ । ತ್ಸಚ್ಚಿದಾನಂದ ಚೇತಸೇ ॥
ಅಗ್ನಿಷ್ಟೋಮ ಸ್ವರೂಪಾಯ । ಶಿವಾಯ ಗುರವೇ ನಮಃ ॥ ೮೯ ॥
ಸಪ್ತಸಾಗರ ಪರ್ಯಂತಂ । ತೀರ್ಥಸ್ನಾನ ಫಲಂಯಥಾ ॥
ಗುರುಪಾದೋದ ಬಿಂದೋಶ್ಚ । ಸಹಸ್ರಾಂ ಶೇನ ತತ್ಫಲಂ ॥ ೯೦ ॥
ಶಿವೇ ಕೃದ್ಧೇ ಗುರುಸ್ತ್ರಾತಾ । ಗುರೌಕೃದ್ಧೇನ ಕಶ್ಚನ ॥
ತಸ್ಮಾತ್ಸರ್ವ ಪ್ರಯತ್ನೇನ । ಗುರುಮೇವ ಸಮಾಶ್ರಯೇತ್ ॥ ೯೧ ॥
ವಂದೇ ಗುರುಪದ ದ್ವಂದ್ವಂ । ವಾಙ್ಮನೋತೀತಗೋಚರಂ ॥
ಶ್ವೇತ ರಕ್ತ ಪ್ರಭಾಭಿನ್ನಂ । ಶಿವಶಕ್ತ್ಯಾತ್ಮಕಂಪರಂ ॥ ೯೨ ॥
ಅತ್ರಿನೇತ್ರಶ್ಶಿವಸ್ಸಾಕ್ಷಾತ್ । ದ್ವಿಬಾಹುಶ್ಚ ಹರಿಃ ಸ್ಮೃತಃ
ಅಚತುರ್ವದನೋ ಬ್ರಹ್ಮಾ । ಶ್ರೀಗುರುಃ ಕಥಿತಃ ಪ್ರಿಯೇ ॥ ೯೩ ॥
ಅಯಂ ಮಯಾಂ ಜಲಿರ್ಬದ್ಧೋ । ದಯಾಸಾಗರ ಸಿದ್ಧಯೇ ॥

ಯದನುಗ್ರಹತೋ ಜಂತು | ಶ್ಚಿತ್ರ ಸಂಸಾರ ಮುಕ್ತಿಭಾಕ್ || ೯೪ ||
ಶ್ರೀಗುರೋಃ ಪರಮಂ ರೂಪಂ | ವಿವೇಕಂ ಚಕ್ಷುರಗ್ರತಃ ||
ಮಂದಭಾಗ್ಯಾ ನಪಶ್ಯಂತಿ | ಅಂಧಾಸ್ಸೂರ್ಯೋದಯಂ ಯಥಾ || ೯೫ ||
ಕುಲಾನಾಂ ಕುಲಕೋಟೀನಾಂ | ತಾರಕಸ್ತತ್ರ ತತ್ಕ್ಷಣಾತ್ ||
ಅತಸ್ತಂ ಸದ್ಗುರುಂ ಜ್ಞಾತ್ವಾ | ತ್ರಿಕಾಲ ಮಭಿವಂದಯೇತ್ || ೯೬ ||
ಶ್ರೀನಾಥ ಚರಣದ್ವಂದ್ವಂ | ಯಸ್ಯಾಂ ದಿಶಿವಿರಾಜತೇ ||
ತಸ್ಯಾಂ ದಿಶಿನಮಸ್ಕುರ್ಯಾತ್ | ಭಕ್ತ್ಯಾ ಪ್ರತಿದಿನಂ ಪ್ರಿಯೇ || ೯೭ ||
ಸಾಷ್ಟಾಂಗ ಪ್ರಣಿಪಾತೇನ | ಸ್ತುವನ್ನಿತ್ಯಂ ಗುರುಂ ಭಜೇತ್ ||
ಭಜನಾತ್ ಸ್ಥೈರ್ಯಮಾಪ್ನೋತಿ | ಸ್ವಸ್ವರೂಪಮಯೋಭವೇತ್ || ೯೮ ||
ದೋರ್ಭ್ಯಾಂ ಪದ್ಭ್ಯಾಂಚ ಜಾನುಭ್ಯಾಂ | ಉರಸಾ ಶಿರಸಾ ದೃಶಾ ||
ಮನಸಾ ವಚಸಾಚೇತಿ | ಪ್ರಣಾಮೋಷ್ಟಾಂಗ ಉಚ್ಯತೇ || ೯೯ ||
ತಸ್ಮೈದಿಶೇ ಸತತ ಮಂಜಲಿರೇಷ ನಿತ್ಯಂ |
ಪ್ರಕ್ಷಿಪ್ಯತೇ ಮುಖರಿತೈರ್ಮಧುರಂ ದ್ವಿರೇಫೈಃ ||
ಜಾಗರ್ತಿಯತ್ರ ಭಗವಾನ್ ಗುರುಚಕ್ರವರ್ತೀ |
ವಿಶ್ವಸ್ಥಿತಿ ಪ್ರಲಯ ನಾಟಕ ನಿತ್ಯಸಾಕ್ಷೀ || ೧೦೦ ||
ಅಭ್ಯಸ್ತೈಃ ಕಿಮುದೀರ್ಘಕಾಲ ವಿಮಲೈರ್ವ್ಯಾಧಿ ಪ್ರದೈರ್ದುಷ್ಕರೈಃ |
ಪ್ರಾಣಾಯಾಮ ಶತೈರನೇಕ ಕರಣೈ ದುಃಖಾತ್ಮಕೈರ್ದುರ್ಜಯೈಃ ||
ಯಸ್ಮಿನ್ನಭ್ಯುದಿತೇ ವಿನಶ್ಯತಿ ಬಲೀವಾಯುಃ ಸ್ವಯಂ ತತ್ಕ್ಷಣಾತ್ |
ಪ್ರಾಪ್ತ್ಯ ಸ್ತತ್ಸಹಜ ಸ್ವಭಾವಮನಿಶಂ ಸೇವೇತಮೇಕಂ ಗುರುಂ || ೧೦೧ ||
ಜ್ಞಾನಂ ವಿನಾಮುಕ್ತಿಪದಂ | ಲಭ್ಯತೇ ಗುರುಭಕ್ತಿತಃ ||
ಗುರೋಃ ಸಾದೃಶ್ಯತೋ ನಾನ್ಯತ್ | ಸಾಧನಂ ಗುರುಮಾರ್ಗಿಣಾಂ ||೧೦೨||
ಯಸ್ಮಾತ್ ಪರತರಂ ನಾಸ್ತಿ | ನೇತಿ ನೇತೀತಿ ವೈಶ್ರುತಿಃ ||
ಮನಸಾ ವಚಸಾಚೈವ | ಸತ್ಯಮಾರಾಧಯೇದ್ಗುರುಂ || ೧೦೩ ||
ಗುರೋಃ ಕೃಪಾಪ್ರಸಾದೇನ | ಬ್ರಹ್ಮ ವಿಷ್ಣು ಮಹೇಶ್ವರಾಃ ||
ಸಾಮರ್ಥ್ಯಂ ತತ್ಪ್ರಸಾದೇನ ಕೈವಲ್ಯಂ ಗುರುಸೇವಯಾ || ೧೦೪ ||
ದೇವಕಿನ್ನರ ಗಂಧರ್ವಾಃ | ಪಿತೃಯಕ್ಷಾಸ್ತು ತುಂಬುರಾಃ ||
ಮುನಯೋಽಪಿ ನಜಾನಂತಿ | ಗುರುಶುಶ್ರೂಷಣಾವಿಧಿಂ || ೧೦೫ ||

ಮಹಾಹಂಕಾರ ಭಾವೇನ । ತಪೋವಿದ್ಯಾ ಬಲೀನಚ ॥
ಭ್ರಮಂತಿ ಸಂಸಾರ ಕುಹರೇ । ಘಟೀಯಂತ್ರಂ ಯಥಾಪ್ರನಃ ॥ ೧೦೬ ॥
ನಮುಕ್ತಾ ದೇವಗಂಧರ್ವಾಃ । ಪಿತರೋಯಕ್ಷಕಿನ್ನರಾಃ ।
ಋಷಯಃ ಸಿದ್ಧಸಾಧ್ಯಾಶ್ಚ । ಗುರುಸೇವಾ ಪರಾಙ್ಮುಖಾಃ ॥ ೧೦೭ ॥
ಧ್ಯಾನಂ ಶೃಣುಮಹಾದೇವಿ । ಸರ್ವಾನಂದ ಪ್ರದಾಯಕಂ ॥
ಸರ್ವಸೌಖ್ಯ ಕರಂಚೈವ । ಭುಕ್ತಿ ಮುಕ್ತಿ ಪ್ರದಾಯಕಂ ॥ ೧೦೮ ॥
ಹೃದಂಬುಜೇ ಕರ್ಣಿಕ ಮಧ್ಯಸಂಸ್ಥಂ ।
ಸಿಂಹಾಸನೇ ಸಂಸ್ಥಿತ ದಿವ್ಯಮೂರ್ತಿಂ ॥
ಧ್ಯಾಯೇದ್ಗುರುಂ ಚಂದ್ರಕಲಾಪ್ರಕಾಶಂ ।
ಸಚ್ಚಿತ್ಸುಖಾಭೀಷ್ಟ ವರಂದಧಾನಂ ॥ ೧೦೯ ॥
ಶ್ವೇತಾಂಬರಂ ಶ್ವೇತ ವಿಲೇಪಪುಷ್ಪಂ ।
ಮುಕ್ತಾ ವಿಭೂಷಂ ಮುದಿತಂ ದ್ವಿನೇತ್ರಂ ॥
ವಾಮಾಂಕ ಪೀಠಸ್ಥಿತ ದಿವ್ಯಶಕ್ತಿಂ ।
ಮಂದಸ್ಮಿತಂ ಸಾಂದ್ರ ಕೃಪಾನಿಧಾನಂ ॥ ೧೧೦ ॥
ಯಸ್ಮಿನ್ ಸೃಷ್ಟಿಸ್ಥಿತಿಧ್ವಂಸ । ನಿಗ್ರಹಾನು ಗ್ರಹಾತ್ಮಕಂ ॥
ಪ್ರಕಾಶತೇ ಪಂಚಕೃತ್ಯಂ । ಶ್ರೀಗುರುಂ ತಂ ಶಿವಂಭಜೇತ್ ॥ ೧೧೧ ॥
ಪ್ರಾತಃ ಶಿರಸಿ ಶುಕ್ಲಾಬ್ಜೇ । ದ್ವಿನೇತ್ರಂ ದ್ವಿಭುಜಂಗುರುಂ ॥
ವಾಮಭಾಗೇ ಯುತಂಶಾಂತಂ । ಸ್ವಶಕ್ತ್ಯಾಪೂಜಿತಂ ಸದಾ ॥ ೧೧೨ ॥
ಶ್ರೀಮತ್ಪರಬ್ರಹ್ಮ ಗುರುಂ ಭಜಾಮಿ ।
ಶ್ರೀಮತ್ಪರಬ್ರಹ್ಮ ಗುರುಂ ವದಾಮಿ ॥
ಶ್ರೀಮತ್ಪರಬ್ರಹ್ಮ ಗುರುಂ ಸ್ಮರಾಮಿ ।
ಶ್ರೀಮತ್ಪರಬ್ರಹ್ಮ ಗುರುಂ ನಮಾಮಿ ॥ ೧೧೩
ಬ್ರಹ್ಮಾನಂದಂ ಪರಮಸುಖದಂ ಕೇವಲಂ ಜ್ಞಾನಮೂರ್ತಿಂ ।
ದ್ವಂದ್ವಾತೀತಂ ಗಗನಸದೃಶಂ ತತ್ವಮಸ್ಯಾ ದಿಲಕ್ಷ್ಯಂ ॥
ಏಕಂ ನಿತ್ಯಂ ವಿಮಲ ಮಚಲಂ ಸರ್ವದಾ ಸಾಕ್ಷಿ ಭೂತಂ ।
ಭಾವಾತೀತಂ ತ್ರಿಗುಣರಹಿತಂ ಸದ್ಗುರುಂ ತಂನಮಾಮಿ ॥ ೧೧೪ ॥
ಆನಂದ ಮಾನಂದಕರಂ ಪ್ರಸನ್ನಂ । ಜ್ಞಾನಸ್ವರೂಪಂ ನಿಜಬೋಧಯುಕ್ತಂ

